ಮಹಾಕವಿ

# ಕುವೆಂಪು






ಪ್ರಕಾಶನ
...ಂದ್ರ ಕಾಲೋನಿ
...ಊರು — ೨.

ಬೆಲೆ : ೫೦ ನಯೆಪೈಸೆ

# ಮಹಾಕವಿ

# ಕುವೆಂಪು

ಲೇಖಕರು

**ಶ್ರೀನಿವಾಸರಾವ್ ಕೊರಟಿ**

ಗಾಯತ್ರಿ ಪ್ರಕಾಶನ

೧೦೪, ರಾಘವೇಂದ್ರ ಕಾಲೋನಿ

**ಬೆಂಗಳೂರು— ೨.**

## ಕುವೆಂಪುಗೆ

ಸುರಿದು ಕಿವಿಯಿಂದ ಹೃದಯುದಲಿ ಕಡಲಾಗುತಿದೆ
ನಿನ್ನೀ ಮಹಾಕಾವ್ಯ ರಸಜಾಹ್ನವಿ, ಕುವೆಂಪು !
ಸಾವಧಾನದಿ ಹರಿಯುತಿದೆ ಇಲ್ಲಿ ಕೊಳಲಿಂಪು
ಅದರದೊ ದುಮುದುಮಿಸುತಲ್ಲಿ ಸಿಡಿಲಾಗುತಿದೆ
ವಿಶ್ವವೇ ತೊನೆಯೆ ಜೋತಿಹುದದರ ತನಿಬಿಣ್ಪು
ಅಗ್ನಿ ದಿವ್ಯವ ಮೀರಿ ಆನಂದವಾಗುತಿದೆ
ಜಾಗರಾಮುಗ್ಧ ರಾಜಸವು ಸ್ವಪ್ನದಲಂಪು
ಸೆಳೆಯೆ ಶಿಶುಹೃದಯ ಸಾತ್ವಿಕಕೆ ಬದಲಾಗುತಿದೆ
ಪಂಪರನ್ನ ಕುಮಾರವ್ಯಾಸರಾಗೆ ಕುವೆಂಪು
ವ್ಯಾಸನನ್ನವರೆಂತೊ ವಾಲ್ಮೀಕಿಯನ್ನಂತೆ
ಕರೆತಂದ ನಿನ್ನ ಭಾಗೀರಥ್ಯದೇನ್ ಪೆಂಪು !
ಸಹ್ಯಾದ್ರಿ ಋಷ್ಯ ಮೂಕದೊಳೆನಿತು ನೀನ್ ನೋಂತೆ
ಲಂಘಿತ ಮಹಾಕಾವ್ಯ ಜಲಧಿಗೆ ನಮೋ ನಮಃ
ನೀತಾರವಿಂದ ಸಂಜೀವಗೆ ನಮೋ ನಮಃ

— ಕೆ. ನರಸಿಂಹಮೂರ್ತಿ

# ಅರಿಕೆ

ಮಹಾಕವಿ ಕುವೆಂಪುರವರ ಜೀವನ ಹಾಗೂ ಕೃತಿಗಳ ಪರಿಚಯವನ್ನು ಸಾಮಾನ್ಯ ಓದುಗರಿಗೆ ಮಾಡಿಕೊಡುವ ಒಂದು ಪ್ರಯತ್ನ ಇಲ್ಲಿದೆ. ಇದುವರೆಗೆ ಕುವೆಂಪುರವರ ಸಾಹಿತ್ಯ ಕೃತಿಗಳ ಬಗ್ಗೆ ಅನೇಕ ಗ್ರಂಥಗಳು ಪ್ರಕಟವಾಗಿದ್ದರೂ ಅವರ ಜೀವನವನ್ನು ಕುರಿತು ಬರೆದ ಗ್ರಂಥಗಳು ಇಲ್ಲವೆಂದೇ ಹೇಳಬೇಕು. ಈ ಪುಟ್ಟ ಪುಸ್ತಕದಲ್ಲಿ ಕುವೆಂಪುರವರ ಬಗ್ಗೆ ಇದುವರೆಗೆ ತಿಳಿದು ಬಂದ ಸಂಗತಿಗಳನ್ನೂ ಹಲಕೆಲವು ಬರಹಗಳಲ್ಲಿ ಚದುರಿರುವ ವಿಷಯಗಳನ್ನೂ ಒಂದೆಡೆ ಸಂಗ್ರಹಿಸಿದ್ದೇನೆ. ಇದರಲ್ಲಿ ನನ್ನದೆನ್ನುವದಕ್ಕಿಂತಲೂ ಪರರದೆನ್ನುವ ವಿಷಯವೇ ಅಧಿಕವೆಂದು ನಾನು ಬಲ್ಲೆ. ಕುವೆಂಪುರವರ ಬಗ್ಗೆ ಏನೂ ತಿಳಿಯದ ಜನರಿಗೆ ಈ ಕೃತಿಯಿಂದ ಕೆಲಮಟ್ಟಿಗಾದರೂ ಪ್ರಯೋಜನವಾದರೆ ಲೇಖಕನ ಶ್ರಮ ಸಾರ್ಥಕವಾದಂತೆ. ಈ ಪುಸ್ತಕವನ್ನು ಬರೆಯಲು ನಾನು ಅನೇಕ ಗ್ರಂಥಗಳನ್ನು ಉಪಯೋಗಿಸಿಕೊಂಡಿದ್ದೇನೆ. ಅವುಗಳ ಲೇಖಕರಿಗೆ ನಾನು ಋಣಿಯಾಗಿದ್ದೇನೆ. ಈ ಪುಟ್ಟ ಹೊತ್ತಿಗೆಯನ್ನು ಸಕಾಲದಲ್ಲಿ ಅಚ್ಚು ಮಾಡಿಕೊಟ್ಟ ಸಂಯುಕ್ತ ಕರ್ನಾಟಕ ಮುದ್ರಣಾಲಯದವರಿಗೂ ಶ್ರೀ ಕುವೆಂಪುರವರ ಚಿತ್ರ ಉಪಯೋಗಿಸಿಕೊಳ್ಳಲು ಅನುಮತಿಯನ್ನಿತ್ತ 'ಕಸ್ತೂರಿ' ಬಳಗದವರಿಗೂ ನಾನು ಕೃತಜ್ಞನಾಗಿದ್ದೇನೆ.

ಹುಬ್ಬಳ್ಳಿ
ಅಕ್ಷಯ್ಯ ತೃತೀಯಾ
೧೯೭೯

ಶ್ರೀನಿವಾಸರಾವ್ ಕೊರಟಿ

# ಮಹಾಕವಿ ಕುವೆಂಪು

ಆ ಸಂಜೆ ಬೆಂಗಳೂರಿನ ಕನ್ನಡ ಸಾಹಿತ್ಯಪರಿಷತ್ತಿನಲ್ಲಿ ಶ್ರೀ ಕೆ. ವಿ. ಪುಟ್ಟಪ್ಪನವರ ಸನ್ಮಾನಸಮಾರಂಭ ನಡೆಯುವದಿತ್ತು. ಭಾರತ ಸರಕಾರದವರು ಅವರು ರಚಿಸಿದ "ಶ್ರೀ ರಾಮಾಯಣ ದರ್ಶನ" ಕಾವ್ಯಕ್ಕೆ ೫೦೦೦ ರೂಪಾಯಿಗಳ ಬಹುಮಾನವಿತ್ತುದಕ್ಕಾಗಿ ಅವರನ್ನು ಸನ್ಮಾನಿಸಲು ನಿರ್ಧರಿಸಿತ್ತು. ಸಂಜೆಯಾಗುತ್ತಿದ್ದಂತೆ ನಿರಭ್ರವಾಗಿದ್ದ ಆಕಾಶವು ಮೋಡಗಳಿಂದ ತುಂಬಿ, ಜಿರೋ ಎಂದು ಮಳೆ, ಭೋರ್ ಎಂದು ಬೀಸುವ ಗಾಳಿಗೆ ಆರಂಭವಾಯಿತು. ಬಹುಶಃ ಅಂದಿನ ಸನ್ಮಾನಸಮಾರಂಭವನ್ನು ಮಳೆಯ ನಿಮಿತ್ತದಿಂದ ಮುಂದಕ್ಕೆ ಹಾಕಿರಬೇಕೆಂದುಕೊಂಡೇ ನಾನು ಪರಿಷತ್ತಿನ ಸಭಾಭವನಕ್ಕೆ ತಡಮಾಡಿ ಬಂದೆ! ಆದರೆ ಅಲ್ಲಿ ನಾನು ಕಂಡುದೇನು? ಸುಮಾರು ಐನೂರು ಜನ ಹಿಡಿಸಬಹುದಾಗಿದ್ದ ಸಭಾಭವನದಲ್ಲಿ ಸಾವಿರ ಮಂದಿ ನೆರೆದಿದ್ದರು. ಹೊರಗೂ ಅಷ್ಟೇ ಜನದಟ್ಟಣೆ ಸೇರಿತ್ತು. ಪ್ರಾಸ್ತಾವಿಕ ಪರಿಚಯ ಭಾಷಣ ಮುಗಿದು ಶ್ರೀ ಪುಟ್ಟಪ್ಪನವರು ಭಾಷಣಕ್ಕೆ ಎದ್ದು ನಿಂತರು. ಸಭೆ ಕರತಾಡನ ಮಾಡಿ ಅವರಿಂದ ಏನು ಬರುವದೋ ಎಂದು ಮೈಯೆಲ್ಲ ಕಣ್ಣಾಗಿಸಿ, ಕಿವಿಯಾಗಿಸಿಕೊಂಡು ಆಲಿಸಿತು! ಸಭೆಯಲ್ಲಿ ಸೂಜಿ ಬಿದ್ದರೂ ಕೇಳುವಷ್ಟು ಮೌನ ಆವರಿಸಿತ್ತು. ಶ್ರೀ ಪುಟ್ಟಪ್ಪನವರು ಭಾಷಣ ಮಾಡಲು ನಿಂತವರು ಸುತ್ತಲೂ ಒಮ್ಮೆ

ನೋಡಿದರು. ಮರುಕ್ಷಣ ಭಾವೋನ್ಮಾದದಲ್ಲಿ ಕಣ್ಣು
ಮುಚ್ಚಿದರು. ಸಭೆಯಲ್ಲಿ ಆಕ್ಷಣ ವಿದ್ಯುತ್ ಸಂಚಾರವಾ-
ಯಿತು. ಜನ ಅವಾಕ್ಕಾಗಿ ಆಲಿಸಿದರು. ಪುಟ್ಟಪ್ಪನವರು
ತಮ್ಮ ಭಾವಸಮಾಧಿಯಿಂದ ಎಚ್ಚೆತ್ತು ಅಕ್ಕಪಕ್ಕ ನೋಡಿ
ದರು. ಒಂದುಕಡೆ ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರರೂ
ಇನ್ನೊಂದು ಕಡೆ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳೂ ಭದ್ರಾ
ಸನದಲ್ಲಿ ಮಂಡಿಸಿದ್ದರು. ಇವರನ್ನೊಮ್ಮೆ ದಿವ್ಯೋನ್ಮಾದದಲ್ಲಿ
ತೃಪ್ತಿಯಿಂದ ನೋಡಿ, ಕೈಜೋಡಿಸಿ, ಸ್ವರ್ಗದ ಕಡೆ ನೋಡು
ವಂತೆ ಅಂತರಿಕ್ಷದಕಡೆ ನೋಡುತ್ತಾ, "ದಿವಂಗತರೂ ಪೂಜ್ಯರೂ
ಆದ ಬಿ. ಎಂ. ಶ್ರೀಕಂಠಯ್ಯನವರೇ, ವೆಂಕಣ್ಣಯ್ಯನವರೇ
ಕನ್ನಡ ಸಾಹಿತ್ಯಪರಿಷತ್ತನ್ನು ಮೊಳಕೆಯಿಂದ ನೀರು
ಹೊಯ್ದು ಬೆಳೆಸಿದ ಈ ಭಾವಚಿತ್ರಗಳಲ್ಲಿರುವ ಸೂಕ್ಷ್ಮ
ಚೇತನಗಳಿರಾ (ಎಂದು ಸಭೆಯಲ್ಲಿದ್ದ ಭಾವಚಿತ್ರಗಳ ಕಡೆ
ಕೈತೋರಿ) ನಿಮ್ಮೆಲ್ಲರನ್ನೂ ಇಲ್ಲಿಗೆ ಆಹ್ವಾನಿಸಿ ನನ್ನ
ಅನಂತಾನಂತ ವಂದನೆಗಳನ್ನು ಅರ್ಪಿಸುತ್ತೇನೆ...." ಎಂದು
ಹೇಳಿ ಒಂದು ಕ್ಷಣ ಮಾತು ನಿಲ್ಲಿಸಿ ಮೌನವಾದರು
ಅನಂತರ ಮೆಲ್ಲನೆ ಉಸಿರಿದರು:

"ನನ್ನ ಶ್ರೀಮಂತ ಮನಸ್ಸು ಇಂಥ ರಿಕ್ತದೆಸೆಯನ್ನು
ಹಿಂದೆಂದೂ ಅನುಭವಿಸಿರಲಿಲ್ಲ....!"

ಇದು ಲೌಕಿಕ ಉತ್ಸವದಲ್ಲಿ ಪುಟ್ಟಪ್ಪನವರು ಅಲೌಕಿಕತೆ
ಯನ್ನು ತರುವ ರೀತಿ! ಅಂದಿನ ಭಾಷಣದಲ್ಲಿ ಅವರು ತಮ್ಮ
ನಡೆನುಡಿ, ಹಾವಭಾವಗಳಲ್ಲಿ ತಾವು ಕವಿ ಎಂಬುದನ್ನು

ತೋರಿಸಿದರು. ತಾವು ಕವಿಯಾಗಿರುವಂತೆ ಸಮಯ ಬಂದರೆ ಕಲಿಯೂ ಆಗಬಲ್ಲರೆಂಬುದಕ್ಕೆ ಅಂದಿನ ಅವರ ಅಸ್ಖಲಿತ ವಾಣಿಯೇ ಸಾಕ್ಷಿ!

ಅವರು ತಾವು ಕಾವ್ಯಸೃಷ್ಟಿಗೆ ತೊಡಗಿದ ಆರಂಭದ ದಿನಗಳನ್ನು ನೆನೆದು ಹೇಳಿದರು :

"ನಮಗೆ ನಮ್ಮತನವನ್ನು ಎಚ್ಚರಿಸಿ ಕೊಟ್ಟವರು ಪರಕೀಯರು. ನಾನು ಇಂಗ್ಲೀಷಿನಲ್ಲಿ ಕವನಗಳನ್ನು ರಚಿಸಿದಾಗ ಕನ್ನಡದಲ್ಲಿ ಕವನ ರಚಿಸು ಎಂದು ಉಪದೇಶಿಸಲು ಯಾವ ಕನ್ನಡಿಗನೂ ಮುಂದೆ ಬರಲಿಲ್ಲ. ಒಮ್ಮೆ ನಾನು ಇಂಗ್ಲೀಷಿನಲ್ಲಿ ಪದ್ಯ ರಚಿಸಿ, ಅದನ್ನು ಐರ್ಲೆಂಡಿನ ಸುಪ್ರಸಿದ್ಧ ಕವಿ ಹಾಗು ಕಲಾವಿದ ಜೇಮ್ಸ್ ಕಸಿನ್ಸ್‌ರವರಿಗೆ ತೋರಿಸಿದೆ. ಅವರು ಅದನ್ನು ನೋಡಿ ಸಂತೋಷಪಟ್ಟು 'ನೀವೇಕೆ ಕನ್ನಡದಲ್ಲಿ ಬರೆಯಬಾರದು?' ಎಂದು ಹೇಳಿ ಕನ್ನಡದ ಬಗ್ಗೆ ನನ್ನ ಕಣ್ಣನ್ನು ತೆರೆಸಿದರು. ಮುಂದೆ ನಾನು ಕನ್ನಡದಲ್ಲಿ ಕಾವ್ಯ ರಚಿಸಲು ತೊಡಗಿದೆ. ಅಂತೆಯೇ ನಮಗೆ ಸ್ವಾತಂತ್ರ್ಯ ಪಾಠ ಕಲಿಸಿಕೊಟ್ಟವರೂ ಪರಕೀಯರೇ...."

ಅನಂತರ ತಮಗೆ ಪರಮಪ್ರಿಯವಾಗಿರುವ ಕನ್ನಡ ನಾಡು ನುಡಿಗಳ ಬಗ್ಗೆ ಹೊರಳಿ :

"ಕನ್ನಡವು ಪ್ರಥಮ ಭಾಷೆಯಾಗಬೇಕು. ಕನ್ನಡ ಶಿಕ್ಷಣ ಮಾಧ್ಯಮವಾಗಬೇಕು! ಸಕಲ ವಿಚಾರ ಪ್ರಕಟನೆಗೂ ಕನ್ನಡವೇ ನಾಲಿಗೆಯಾಗಬೇಕು! ವಿಜ್ಞಾನ ಮುಂತಾದ ವಿಷಯುಗಳು ಕನ್ನಡದಲ್ಲಿ ಬೋಧಿಸಲ್ಪಡಬೇಕು.

“ ನಾವು ಈ ಸಾಧನೆ ಮಾಡಬೇಕು ! ಸುಮ್ಮನೆ ಕುಳಿತ
ನಾವು ಮೃತರಾಗುತ್ತೇವೆ. ನಾವು ಭಾರತೀಯರ ಸಮಿ
ಯಲ್ಲಿ ಒಂದು ಗುಂಪಾಗಿ ಬಾಳಲು ಸಾಧ್ಯವಿಲ್ಲ. ಕನ್ನ
ಭಾಷೆ ಭದ್ರವಾದಂದೇ ನನಗೆ ಅಮೃತಪಾನ, ಅಮೃತಸ್ನಾನ
ಆ ದಿನ ಬೇಗನೆ ಬರಲಿ !

“ ಕನ್ನಡಿಗರು ಏನಿಲ್ಲದಿದ್ದರೂ ಔದಾರ್ಯಕ್ಕೆ ಹೆಸರಾ
ವರು. ತಾನಿರುವ ಮನೆಯಲ್ಲಿ ತನಗೇ ಜಾಗವಿಲ್ಲದಿದ್ದರೂ
ಹೊರಗಿನವರಿಗೆ ಮಣೆಹಾಕಿ, ಅವರಿಗೆ ಮನೆಯ ಯಜಮಾ
ಕೆಯ ಪಟ್ಟಕಟ್ಟಿ ಅತಿಥಿ ಸತ್ಕಾರ ಮಾಡುವುದರಲ್ಲಿ ಕನ್ನಡಿ
ರಿಗೆ ಎರಡನೆಯವರು ಇಲ್ಲ ! ಇನ್ನು ಈ ಔದಾರ್ಯ ಸಾಕು
ಕನ್ನಡದ ಮನೆಗೆ ಬರುವವರೆಲ್ಲರೂ ಅತಿಥಿಗಳಾಗಿಯೇ ಬ
ಬೇಕು ! ಯಜಮಾನರಾಗಿ ಬರಬಾರದು !

“ ಕನ್ನಡದ ಬುಡ ಭದ್ರವಾಗಬೇಕು ! ಅದನ್ನು ಗೆದ್ದ
ತಿನ್ನಲು ಬಿಡಬಾರದು ! ಬುಡಕ್ಕೆ ಗೊಬ್ಬರಹಾಕುವ ಬದ
ಹೂಬಿಡುವ ಕೊಂಬೆಗೆ ಗೊಬ್ಬರ ಹಾಕುವ ತಿಳಿಗೇಡಿತನ
ಇನ್ನು ಸಾಕು ! ಇದು ಹೋಗದೆ ನಮಗೆ ಮುಕ್ತಿಯಿ
ಅಲ್ಲಿಯವರೆಗೆ ನಾವು ಹೆಂಚಿನ ಕಾರ್ಖಾನೆಯ ಹೆಂಚುಗ
ತೆಯೇ ಸರಿ ! ” ಎಂದು ಸಿಂಹಗರ್ಜನೆ ಮಾಡಿದರು.

ಅವರು ಕನ್ನಡಕ್ಕಾಗಿ, ಅಖಂಡ ಕರ್ನಾಟಕಕ್ಕಾ
ತಳೆದ ಧೋರಣೆ ಎಷ್ಟೋ ಬಾರಿ ಸರಕಾರವನ್ನು ಎದುರು ಹಾ
ಕೊಳ್ಳುವಂತೆ ಮಾಡಿತ್ತು. ಆದರೆ ಪುಟ್ಟಪ್ಪನವರು ಯಾರಿಗ
ಹೆದರಲಿಲ್ಲ. ಯಾವುದಕ್ಕೂ ಅಂಜಲಿಲ್ಲ. “ ಸಾಯುತಿದೆ ನಿ

ನುಡಿ, ಓ ಕನ್ನಡದ ಕಂದರಿರಾ "ಎಂದು ಕೂಗಿ ಎಚ್ಚರಿಸುವುದನ್ನು ಬಿಡಲಿಲ್ಲ. ಇಂದು ಅಖಂಡ ಕರ್ನಾಟಕ ಸ್ಥಾಪನೆಯಾಗಿದ್ದರೆ ಇದಕ್ಕೆ ಕಳೆದ ಮೂರುದಶಕಗಳಲ್ಲಿ ಶ್ರೀ ಆಲೂರರವರು, ಶ್ರೀ ದಿವಾಕರರು, ದಿವಂಗತ ಶ್ರೀಯವರು, ಶ್ರೀಪುಟ್ಟಪ್ಪನಂತಹವರು ತಳೆದ ಘೋಷಣೆ, ಹಾಕಿಕೊಟ್ಟ ಮಾರ್ಗದರ್ಶನ, ಉಂಟು ಮಾಡಿದ ಜನಜಾಗೃತಿಗಳೇ ಕಾರಣವೆಂದು ಎದೆತಟ್ಟಿ ಹೇಳಬಹುದು !

ಪುಟ್ಟಪ್ಪನವರು ಮಾತನಾಡುವುದು ಕಡಿಮೆ. ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದು ಇನ್ನೂ ಕಡಿಮೆ. ಆದರೆ ಅವರು ಮಾತನಾಡಿದರೆ ಕೇಳುವವರನ್ನು ಬೆರಗುಗೊಳಿಸುವಂತೆ ಮಾತನಾಡುತ್ತಾರೆ. ಮಾತುಮಾತಿಗೆ ಒಂದು ನಿದರ್ಶನ, ಇಲ್ಲವೇ ಪೂರ್ಣ ಮೌನ. ಜಳ್ಳು ಮಾತೆಂಬುದು ಪುಟ್ಟಪ್ಪನವರ ಶಬ್ದಭಂಡಾರದಲ್ಲೇ ಇಲ್ಲ! ಶ್ರೀ ಪುಟ್ಟಪ್ಪನವರಿಗೆ ಪ್ರಿಯವಾದ ನಾಲ್ಕು ವಿಷಯಗಳನ್ನು ಅವರ ಶಿಷ್ಯರೊಬ್ಬರು ಕುಪ್ಪಳ್ಳಿ, ಕನ್ನಡ, ಕಾವ್ಯ, ಕಾಜಾಣ ಎಂಬ ಪದಗಳಲ್ಲಿ ಸಂಗ್ರಹಿಸಿ ಹೇಳಿದ್ದಾರೆ. ಪುಟ್ಟಪ್ಪನವರ ಬಾಳಿನ ಸೂತ್ರವನ್ನು ಹಿಡಿದು ಮುನ್ನಡೆಸುತ್ತಿರುವ ನಾಲ್ಕು ಶಕ್ತಿಗಳೆಂದರೆ ಇವೇ.

ಪುಟ್ಟಪ್ಪನವರು ಮಲೆನಾಡಿನ ಹೃದಯದಂತಿರುವ ತೀರ್ಥಹಳ್ಳಿಗೆ ೯ ಮೈಲು ದೂರವಿರುವ ಕುಪ್ಪಳ್ಳಿಯಲ್ಲಿ ಕ್ರಿ. ಶ. ೧೯೦೪ನೇ ಡಿಸೆಂಬರ ೨೯ ರಂದು ಹುಟ್ಟಿದರು. ಇವರ ತಂದೆ ವೆಂಕಟಪ್ಪನವರು. ತಾಯಿ ಸೀತಮ್ಮ. ಇವರದು ತುಂಬು ಸಂಸಾರ. ಆಗರ್ಭ ಶ್ರೀಮಂತರಾದ ಇವರು ಆ ಪ್ರಾಂತಕ್ಕೆಲ್ಲಾ

ಗಣ್ಯರಾಗಿದ್ದು, ಸಮಾಜ ಮುಖಂಡರೂ ಆಗಿದ್ದರು. ಪುಟ್ಟ
ನವರ ಬಾಲ್ಯ ಮಲೆನಾಡಿನಲ್ಲಿ ಅಲ್ಲಿನ ಗಿರಿ, ಕಾನನ, ನಿರ್ಝ
ರಣಿಗಳ ನಡುವೆ ಕಳೆದುದರಿಂದ ಸಹಜವಾಗಿಯೇ ಅವರ
ನಿಸರ್ಗದ ಬಗ್ಗೆ ಬಾಲ್ಯದಿಂದಲೂ ಒಂದು ಬಗೆಯ ಆದರ, ಅ
ಮಾನಗಳು ಬೆಳೆದು ಬಂದವು. " ಹಕ್ಕಿ ಬಳಗ ಸುತ್ತ ಕೂ
ಬೈಗು ಬೆಳಗು ಹಾಡಿಹಾಡಿ, ಮಲೆಯನಾಡ ಸಗ್ಗಮಾಡಿ ನ
ಸುತ್ತಿದ್ದ" ಮಲೆನಾಡಿನಲ್ಲಿ ಅವರ ಎಳೆಯ ದಿನಗಳು ಕಳೆದ
"ಹಕ್ಕಿ ಬಳಗ ಹಾಡುತಿರುವ, ಕಾಡು ಮುತ್ತು ಕೊಡುತಲಿರು
ಸೊಬಗಿನ ಬೀಡಿನಲ್ಲಿ" ಗುಡುಗು, ಮಳೆಸೀರಿನ ಸದ್ದು, ಸಿರಿ
ದೀಪ, ಸುಂದರ ಋತುಗಳು. ನೇಸರು, ಚಂದಿರ, ತಾರೆ, ಬೈಗ
ಬೆಳಗು, ಹಗಲಿರುಳುಗಳ ಸಂಗಮದಲ್ಲಿ ಸುಗ್ಗಿಯ, ಬನ
ಹೂವು-ಹಸಿರುಗಳ ನಡುವೆ, ಮಂಜುಮಲೆಗಳ ಮುಗಿ
ಮಾಲೆಯ ಲೀಲೆಯನ್ನು ನೋಡುತ್ತ, ವಿಪಿನವಿಹಂಗಮಗ
ಇಂಚರ ಕೇಳುತ್ತ, ಕಾಮನ ಬಿಲ್ಲನ್ನು ಕಾಣುತ್ತ, ಮಿಂಚ
ಗುಡುಗುಗಳನ್ನು ಆಲಿಸುತ್ತ ಬನ, ಗಿರಿ, ಹೊಳೆ, ತೊ
ತೋಟ, ತುಂಗೆಯ ತಡಿಗಳಲ್ಲಿ ಮೈ ಮರೆತು ಆಟವಾಡು
ತಮ್ಮ ಬಾಲ್ಯವನ್ನು ಕಳೆದರು.

ಒಮ್ಮೆ ಅವರು ತೀರ್ಥಹಳ್ಳಿಯ ಮಾಧ್ಯಮಿಕ ಶ
ಯಲ್ಲಿ ಕಲಿಯುತ್ತಿರುವಾಗ, ಅವರ ಎಂಟನೆಯ ವಯಸ್ಸಿನ
ಅವರ ಮಾವ ಮತ್ತು ಚಿಕ್ಕಪ್ಪಂದಿರು ಅವರನ್ನು ದೇವಂ
ಕರೆದುಕೊಂಡು ಹೋದರು. ಕಾಡು ದಾರಿಯಲ್ಲಿ ಅವರು
ದಿದ್ದಾಗ ಸಂಜೆ ಸರಿದು ಕತ್ತಲಾಗಿ, ಅಲ್ಲಿದ್ದ ಕೆರೆಯು ಲಕ್ಷ್ಯ

ತರ ಮಿಣುಕು ಹುಳುಗಳ ಪ್ರಕಾಶದಿಂದ ಧಗ್ಗನೆ ಉರಿಯುವಂತೆ ಕಂಡಿತು. ಅಂದು ಅವರಿಗಾದ ಅನುಭವ-೧೫ ವರ್ಷಗಳ ಮೇಲೆ “ಮಿಣುಕು ಹುಳಗಳು” ಎಂಬ ಕವನವಾಗಿ ರೂಪುಗೊಂಡಿತು. ಹೀಗೆ ಮಗುವಿನ ಹೃದಯದಲ್ಲಿ ಬೀಜರೂಪವಾಗಿ ಹುಟ್ಟಿ, ಮುಂದೆ ಮರವಾಗಿ ಹೂಬಿಟ್ಟ ಕವನಗಳು ಎಷ್ಟೋ!

ಮುಂದೆ ಅವರ ವಿದ್ಯಾಭ್ಯಾಸ ಮೈಸೂರಿನಲ್ಲಿ ಸಾಗಿತು. ಅವರು ಮೈಸೂರಿನ ವೆಸ್ಲಿಯನ್ ಮಿಷನ್ ಹೈಸ್ಕೂಲಿಗೆ ಸೇರಿದರು. ಅನಂತರ ಮಹಾರಾಜಾ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರೆಯಿತು. ಅದು ಅವರ ಜೀವನದ ಒಂದು ಪರ್ವಕಾಲ. ಅವರು ಕಲಿತ ಮಹಾರಾಜಾ ಕಾಲೇಜು, ಅವರು ವಾಸವಾಗಿದ್ದ ಶ್ರೀ ರಾಮಕೃಷ್ಣಾಶ್ರಮಗಳು ಅವರ ಜೀವನದ ಝುರಿಯನ್ನೇ ಬದಲಾಯಿಸಿದವು. ಅವರ ವ್ಯಕ್ತಿತ್ವವನ್ನೇ ಮೂರ್ಪಡಿಸಿದವು. ಅವರು ಮಹಾರಾಜಾ ಕಾಲೇಜಿನಲ್ಲಿ ತತ್ತ್ವಶಾಸ್ತ್ರ ಕಲಿಯಲು ಇಚ್ಛಿಸಿ, ತಮ್ಮ ಆನರ್ಸ್ ತರಗತಿಯಲ್ಲಿ ಅದನ್ನೇ ವಿಶೇಷ ವಿಷಯವಾಗಿ ತೆಗೆದುಕೊಳ್ಳಲು ಹೊರಟಿದ್ದರು—ಕನ್ನಡ ನುಡಿಯ ಪುಣ್ಯದಿಂದ, ಕನ್ನಡಾಂಬೆಯ ಭಾಗ್ಯದಿಂದ ಕನ್ನಡವನ್ನು ವಿಶೇಷ ವಿಷಯವಾಗಿ ಆರಿಸಿಕೊಂಡರು! ಮುಂದೆ ಅದರಲ್ಲಿಯೇ ಪರಿಣತರಾಗಿ ಎಂ. ಎ. ಪದವಿಯನ್ನು ಗಳಿಸಿ, ೧೯೨೯ ರಲ್ಲಿ ತಾವು ಓದುಕಲಿತ ಕಾಲೇಜಿನಲ್ಲೇ ಕನ್ನಡ ಪ್ರಾಧ್ಯಾಪಕರಾಗಿ ನೇಮಕರಾದರು.

ಅವರು ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ಅವರಿಗೆ ಕಾವ್ಯರಚನೆಯ ಆಸಕ್ತಿ ಬೆಳೆದಿತ್ತು. ಅವರ ಪ್ರಥಮ ಕವನಗಳು—

ಅವರು ಇನ್ನೂ ಹೈಸ್ಕೂಲು ತರಗತಿಯಲ್ಲಿ ಇದ್ದಾಗ ಬರ
ಕವನಗಳು—ಇಂಗ್ಲೀಷ ಭಾಷೆಯಲ್ಲಿದ್ದು ಅವುಗಳಲ್ಲಿ ಕೆಲ
Beginners Muse ಎಂಬ ಹೆಸರಿನಲ್ಲಿ ಮುಂದೆ ಪ್ರಕಟವ
ದವು. ಆದರೆ ಕಸಿನ್ಸರವರ ಪ್ರೇರಣೆಯಿಂದ, ಇಂಗ್ಲೀಷಿನ
ಭಾವನೆಗಳನ್ನು ಎರಕಹೊಯ್ಯಲು ಹೊರಟಿದ್ದ ಪುಟ್ಟಪ್ಪನವ
ಕನ್ನಡದ ಕಡೆ ಹೊರಳಿದರು. ಅವರು ಬರೆದ ಪ್ರಥಮ ಕನ್ನ
ಕವನ ತಮ್ಮ ಇಂಗ್ಲೀಷ್ ಕವನವೊಂದರ ಕನ್ನಡ ಭಾಷಾಂತ
ಋತುವರ್ಣನೆಯ ಮೇಲೆ. ಆದರೆ ಮೊಟ್ಟಮೊದಲು ಅಚ್ಚಾ
ಕನ್ನಡ ಕವನ 'ಅಮಲನ ಕಥೆ.' ಪುಟ್ಟಪ್ಪನವರು ತಮ್ಮ ಬ
ವನ್ನು ಕನ್ನಡದ ಕಾವ್ಯರಮಣಿಯ ಕಡೆಗೇ ಹರಿಸಿದುದರಿ
ಅವರು ಬರೆದಿದ್ದ ಇಂಗ್ಲೀಷ ಕವನಗಳು ಹಸ್ತಪ್ರತಿಯಲ್ಲೇ ಉ
ದವು. ಈಗಲೂ ಅವರ ಬಳಿ ಅಚ್ಚಿನಮನೆ ಕಾಣದಂತಹ ಕ
ಗಳು ಬೇಕಾದಷ್ಟು ಇವೆ.

ಪುಟ್ಟಪ್ಪನವರು ವಿದ್ಯಾರ್ಥಿಯಾಗಿರುವಾಗಲೇ,
ರಾಮಕೃಷ್ಣಾಶ್ರಮದಲ್ಲಿರುವಾಗಲೇ ಅವರು ಕವಿಗಳ
ಕೀರ್ತಿಗೆ ಪಾತ್ರರಾಗಿದ್ದರು. "ನಾನು ೧೯೨೬ ರಲ್ಲಿ ಕನ್ನ
ಅಧ್ಯಾಪಕನಾಗಿ ಹೋಗುವ ಹೊತ್ತಿಗಾಗಲೇ ಪುಟ್ಟಪ್ಪನೆ
ವಿದ್ಯಾರ್ಥಿಯು ಇದ್ದಾನಂತೆ, ಎಂದು ಜನ ವಿಸ್ಮಯಭರಿತವ
ಮಾತನಾಡುತ್ತಿದ್ದರು. ಆಗ ಉಪಾಧ್ಯಾಯರೂ ಹೆಚ
ಬರೆಯುತ್ತಿರಲಿಲ್ಲ. ಆದ್ದರಿಂದ ನನಗೆ ಈ ತರುಣ ಕವಿಯ ವಿ
ರದಲ್ಲಿ ಒಂದು ಗಾಢವಾದ ಗೌರವವೂ, ತೀವ್ರವಾದ ಕು
ಹಲವೂ ಉಂಟಾಗಿದ್ದವು. ಮೊದಲ ದಿನವೇ ವಿದ್ಯಾರ್ಥಿ

ಹಾಜರಿಯನ್ನು ಕರೆದಾಗ ಪುಟ್ಟಪ್ಪನವರ ಹೆಸರು ಬರಲು ತಟ್ಟನೆ ಕತ್ತೆತ್ತಿ, ಅದು ಯಾರೆಂದು ನೋಡಿದ್ದು ಇಂದಿಗೂ ನನಗೆ ಜ್ಞಾಪಕವಿದೆ. ಅಷ್ಟೇನೂ ದೃಢಾಂಗನಲ್ಲದಿದ್ದರೂ ಕಿಶೋರಚಂದ್ರನ ಎಳೆಬೆಳಕಿನಿಂದ ಶೋಭಿಸುತ್ತ, ಬೇಲೂರ ಗುಡಿಯ ಗೋಡೆಯ ಮೇಲೆ ಕೆತ್ತಿದ್ದ ದೇವತೆಯ ವಿಗ್ರಹದಂತೆ ನಿಶ್ಚಲವಾಗಿ ಕುಳಿತಿದ್ದ ತರುಣ ವಿದ್ಯಾರ್ಥಿಯ ಗಂಭೀರ ಮುಖ-ಮುದ್ರೆಯನ್ನು ನೋಡಿ, ನಾನು ಸಂತೋಷದಿಂದಲೂ, ಮೆಚ್ಚಿಗೆಯಿಂದಲೂ ಕ್ಷಣ ಕಾಲ ಸ್ತಂಭಿತನಾಗಿ ನಿಂತು ಮುಂದೆ ಹೋದೆ. ಅವರು ಏನ್ನು ಬರೆದಿದ್ದರೋ, ಏನೇನು ಬರೆದಿದ್ದರೋ ನನಗೆ ಗೊತ್ತಿರಲಿಲ್ಲ. ಆದರೆ ಸ್ವಲ್ಪ ಕಾಲದಲ್ಲಿಯೇ ಅವರು ಬರೆದಿದ್ದ ಕೆಲವು ಕವಿತೆಗಳನ್ನು--ಒಂದು ನೋಟು ಪುಸ್ತಕದಲ್ಲಿ ಅಡಗಿದ್ದವನ್ನು—ಓದುವ ಸುಯೋಗ ಒದಗಿತು. ಅದೊಂದು ಅಪೂರ್ವ ಅನುಭವ" ಎಂದು ಅವರ ಗುರುಗಳಾಗಿದ್ದ ಪ್ರೊ. ಎ. ಆರ್. ಕೃಷ್ಣ ಶಾಸ್ತ್ರಿಗಳು ಒಂದು ಕಡೆ ಹೇಳಿದ್ದಾರೆ.

ಪುಟ್ಟಪ್ಪನವರು ಶ್ರೀರಾಮಕೃಷ್ಣಾಶ್ರಮಕ್ಕೆ ಸೇರುವ ಮೊದಲೇ ಅಂದರೆ ೧೯-೨೦ರ ವೇಳೆಗಾಗಲೇ ಕವಿತೆಗಳನ್ನು ಬರೆಯಲು ಆರಂಭಿಸಿದ್ದರು. ಆದರೆ ಅವರು ಶ್ರೀರಾಮಕೃಷ್ಣಾಶ್ರಮಕ್ಕೆ ಹೋದ ಮೇಲೆ ಯಮನ ಸೋಲು, ವಾಲ್ಮೀಕಿಯ ಭಾಗ್ಯ ಮುಂತಾದ ನಾಟಕಗಳನ್ನು ಬರೆದರು. ಅವರು ಸಂತೇಪೇಟೆಯ ತಮ್ಮ ಕೊಠಡಿಯಿಂದ ಶ್ರೀರಾಮಕೃಷ್ಣಾಶ್ರಮ ಸೇರಿದುದೇ ಒಂದು ಕಥೆ !

ಪುಟ್ಟಪ್ಪನವರು ಬಿ. ಎ. ತರಗತಿಗೆ ಸೇರಿದ ಲಾಗಾಯಿತು [illegible]

ಮೈಸೂರಿನಲ್ಲಿ ಸ್ಥಾಪಿತವಾಗಿದ್ದ ಶ್ರೀರಾಮಕೃಷ್ಣಾಶ್ರಮ
ಆಗಾಗ್ಗೆ ಬಂದು ಹೋಗುತ್ತಿದ್ದರು. ಅವರು ವಿವೇಕಾನಂ
ಸಿಂಹವಾಣಿಯನ್ನು ಕೇಳಿ ಎಚ್ಚತ್ತಿದ್ದರು. ಅವರ ಆಧ್ಯಾತ್ಮಿ
ಹಸಿವಿಗೆ ಪರಮಹಂಸರ ವಾತ್ಸಲ್ಯ-ವಕ್ಷಸ್ಥಳದಲ್ಲಿ ಅವ
ದೊರೆಯಿತು. ಅವರು ಆಶ್ರಮದ ಪ್ರಾರ್ಥನೆ, ಪ್ರವಚನಗ
ಆಗಾಗ್ಗೆ ಹೋಗುತ್ತಿದ್ದರು. ಒಮ್ಮೆ ಅವರು ನಾಲ್ಕಾರು
ಗಳಾದರೂ ಆಶ್ರಮದ ಕಡೆ ಸುಳಿಯಲಿಲ್ಲ. ಈ ತೇಜಸ್ವಿ
ಣನ ಬಗ್ಗೆ ಮೊದಲಿನಿಂದ ಒಂದು ಬಗೆಯ ಅಸಕ್ತಿ,
ವಾತ್ಸಲ್ಯಗಳನ್ನು ತಳೆದಿದ್ದ ಆಶ್ರಮದ ಅಧ್ಯಕ್ಷರಾಗಿದ್ದ ಸ್ವಾ
ಸಿದ್ಧೇಶ್ವರಾನಂದರು ಅವರ ಬಗ್ಗೆ ಕುತೂಹಲ ಕೆರಳಿ ಪು
ಪ್ಪನವರ ಇತಿಗತಿಗಳನ್ನು ತಿಳಿದು ಬರಲು, ಆಗಷ್ಟೇ ಮೈಸ
ರಿಗೆ ಬಂದು, ಬನುಮಯ್ಯ ಹೈಸ್ಕೂಲಿನಲ್ಲಿ ಉಪಾಧ್ಯಾಯ
ಗಿದ್ದ, ಕನ್ನಡ ಬಾರದ ಮಲೆಯಾಳಿ ನಾ. ಕಸ್ತೂರಿಯ
ಕಳುಹಿಸಿಕೊಟ್ಟರು. ಕಸ್ತೂರಿಯವರಿಗೆ ಸ್ವಾಮಿಗಳೊಂ
ಗೆಳೆತನವಿತ್ತು. ಅವರ ಗಮನಕ್ಕೆ ಪುಟ್ಟಪ್ಪನವರೂ ಬಿದ್ದಿದ್ದ
ಕಸ್ತೂರಿಯವರು ಆಗಷ್ಟೇ ತಮ್ಮ ಶಾಲೆಯಲ್ಲಿ ಶ್ರೀವಿವೇ
ನಂದ ಸ್ಕೌಟ್‌ದಳ ಸ್ಥಾಪಿಸಿದ್ದುದರಿಂದ, ತಮ್ಮ ತರುಣ
ನನ್ನು ಹುಡುಕಿಕೊಂಡು ಬರಲು ಹೊರಟರು. ಅವರು ಸ
ಪೇಟೆಯಲ್ಲಿದ್ದ ಪುಟ್ಟಪ್ಪನವರ ಕೋಣೆಗೆ ಬಂದು ನೋಡಿ
ಪುಟ್ಟಪ್ಪನವರು ಜ್ವರದಿಂದ ಹಾಸಿಗೆ ಹಿಡಿದು ಮಲಗಿ
ಅವರನ್ನು ಆಸ್ಪತ್ರೆಗೆ ಸಾಗಿಸಿದರು. ಅಲ್ಲಿ ಅವರ ಕಾಯಿಲೆ
ವಾದಮೇಲೆ ಸ್ವಾಮೀಜಿಯವರು ಇನ್ನುಮುಂದೆ ಪು
ಸವರು, ಆಶ್ರಮದಲ್ಲಿಯೇ ಇರತಕ್ಕದ್ದೆಂದು ಆಜ್ಞೆ ಮಾಡಿ

ಅಂದಿನಿಂದ ಪುಟ್ಟಪ್ಪನವರು ಸುಮಾರು ೧೨ ವರ್ಷಗಳ ಕಾಲ ಶ್ರೀರಾಮಕೃಷ್ಣಾಶ್ರಮದಲ್ಲಿ ಇದ್ದರು. ತಮ್ಮ ವಿದ್ಯಾಭ್ಯಾಸ ಮುಗಿಸಿ ಅಧ್ಯಾಪಕ ವೃತ್ತಿ ಆರಂಭಿಸಿದಮೇಲೂ ಅವರು ಬಹುಕಾಲ ಅಲ್ಲೇ ಇದ್ದರು.

ಪುಟ್ಟಪ್ಪನವರು ಅಲ್ಲಿದ್ದಾಗ ಅವರು ಎಲ್ಲಿ ಸನ್ಯಾಸಿಯಾಗಿ ಬಿಡುವರೋ ಎನ್ನುವ ಹೆದರಿಕೆ ಅವರ ಮಿತ್ರರಿಗೆ, ಬಂಧುಬಳಗ ದವರಿಗೆ ಇತ್ತು! ಆದರೆ ಪುಟ್ಟಪ್ಪನವರು ಕಾಷಾಯ ವಸ್ತ್ರ ಧರಿಸದೆ, ಸಂಸಾರಿಯಾಗಿ ಹಿಂದಿರುಗಿದರು. ಅವರ ಮಿತ್ರ ರಾದ ದೇಶಿಕಾನಂದಜಿಯವರು ಹೇಳುತ್ತಿದ್ದಂತೆ 'ಪುಟ್ಟಪ್ಪನವ ರಿಗೆ ಸನ್ಯಾಸ ದೀಕ್ಷೆಕೊಡದೇ ಅವರಿಗೆ ತಾವೇ ನಿಂತು ಮನೆ ಕಟ್ಟಿಸಿ, ಮನೆಗೆ ಕಳುಹಿಸಿದರು' ಪುಟ್ಟಪ್ಪನವರು ಶ್ರೀರಾಮಕೃ- ಷ್ಣಾಶ್ರಮದಲ್ಲಿ ಸನ್ಯಾಸಿಯಾಗದೇ ಸಂಸಾರಕ್ಕೆ ಹಿಂದಿರುಗಿ ದುದು ಅನೇಕರಿಗೆ ನಿರಾಶೆಯಾಯಿತು. ಆದರೆ "ನನ್ನದು ಕಾವಿಯ ದಾರಿಯಲ್ಲ ಸಂಸಾರದ ದಾರಿಯಲ್ಲ, ನನ್ನದು ಮೂರನೆಯ ದಾರಿ. ನಾನು ಮುರಾರಿ" ಎಂಬ ಕಿಂಕಿಣಿ ಸಂಕಲನದ ವಚನದಂತೆ ಅವರು ಬಹಿರಂಗದಲ್ಲಿ ಸನ್ಯಾಸಿಯಾ ಗದೆ ಅಂತರಂಗದ ಸನ್ಯಾಸಿಯಾಗಿಯೇ ಇದ್ದರು!

ಅಲ್ಲಿದ್ದ ಹನ್ನೆರಡು ವರ್ಷಗಳು ಅವರ ಉತ್ತರೋತ್ತರ ಜೀವನಕ್ಕೆ ಬೇಕಾದ ಯೋಗ್ಯ ತಳಹದಿಯನ್ನು ಸಿದ್ಧಪಡಿಸಿದವು. ಅವರ ಜೀವನ ವಿಕಸಿಸಿದುದು ಮಾತ್ರವಲ್ಲ—ಮನಸ್ಸು ವಿಸ್ತಾರ ಗೊಂಡಿತ್ತು.

ಶ್ರೀರಾಮಕೃಷ್ಣಾಶ್ರಮದಲ್ಲಿ ಅವರ ಮುಗ್ಧಜೀವ ಸ್ವಾಮಿ

ಸಿದ್ಧೇಶ್ವರಾನಂದರ ಕೈಯಲ್ಲಿ ಸಿಕ್ಕಿ, ಮುಂದಿನ ಮಹತ್ಕಾರ್ಯ
ಸಿದ್ಧವಾಯಿತು. ಸ್ವಾಮೀಜಿಯವರು ತಂದೆಯಾಗಿ, ತಾ
ಯಾಗಿ, ಗೆಳೆಯರಾಗಿ ಪುಟ್ಟಪ್ಪನವರ ಮೇಲೆ ತಮ್ಮ ನಿಮ
ಪ್ರೇಮವನ್ನು ಹರಿಸಿ, ಪ್ರತ್ಯಕ್ಷವಾಗಿ ಪರೋಕ್ಷವಾಗಿ ಅ
ಚೇತನ ಊರ್ಧ್ವಮುಖವಾಗಿ ಆಕಾಶದೆತ್ತರ ಬೆಳೆಯ
ಸಹಾಯಕರಾದರು. ಅವರ ಮೈತ್ರಿ ಕರುಣೆಗಳನ್ನು ಉಂ
ಪುಟ್ಟಪ್ಪನವರ ಜೀವನದ ಬಳ್ಳಿ ಸಮೃದ್ಧವಾಗಿ ಬೆಳೆಯಿ
ಅವರಿಬ್ಬರ ಸ್ನೇಹಸಂಬಂಧ ಅಪೂರ್ವ ಬಗೆಯದಾಗಿತ್ತು.

ಒಮ್ಮೆ ಪುಟ್ಟಪ್ಪನವರು ಏಕಾಗ್ರಚಿತ್ತರಾಗಿ ಕು
ತಮ್ಮ 'ಯಮನ ಸೋಲ'ನ್ನು ರಚಿಸುತ್ತಿದ್ದರು. ಆಗ ಊ
ವೇಳೆಯಾಯಿತೆಂದು ಒಂದೆರಡು ಬಾರಿ ಎಚ್ಚರಿಸಲು ಬ
ಸ್ವಾಮೀಜಿಗೆ ಪುಟ್ಟಪ್ಪನವರು ತಮ್ಮ ಕಾವ್ಯಸಮಾಧಿಗ
ಭಂಗ ಸೈರಿಸದೆ ಸ್ವಾಮೀಜಿ, "ನೀವು ಊಟಮುಗಿಸಿ,
ಪಾಲಿನದನ್ನು ತಟ್ಟೆಯಲ್ಲಿ ಮುಚ್ಚಿಟ್ಟುಬಿಡಿ. ನಾನು ಅನಂ
ಊಟ ಮಾಡುತ್ತೇನೆ" ಎಂದು ಒರಟಾಗಿ ಹೇಳಿದರ
ಪಾಪ! ಸ್ವಾಮೀಜಿಯವರು ಮರುಮಾತಿಲ್ಲದೆ ಅಲ್ಲಿ
ಹೊರಟುಹೋದರು. ಅವರ ಈ ವರ್ತನೆ ಪುಟ್ಟಪ್ಪನವ
ಸಹನೆಯನ್ನು ಕಲಿಸಿಕೊಟ್ಟಿತು. ಅಂತಲೇ ಪುಟ್ಟಪ್ಪನ
ತಮ್ಮನ್ನು ಕಡೆದ ಶಿಲ್ಪಿ ಅವರೆಂದು ತಮ್ಮ ಅನೇಕ ಕವನಗ
ಹಾಡಿ ಹೊಗಳಿ ತಮ್ಮ ಗುರುಭಕ್ತಿಯನ್ನು ತೋರಿಸಿದ್ದಾರೆ.

ಶ್ರೀರಾಮಕೃಷ್ಣಾಶ್ರಮದಲ್ಲಿ ನಡೆದ ಇನ್ನೊಂದು ಚಿರಸ್ಮ
ಯವಾದ ಘಟನೆ ಎಂದರೆ, ಪುಟ್ಟಪ್ಪನವರು 'ಯಮನಸೋ

ಬರೆಯುತ್ತಿದ್ದಾಗ, ಅವರು ಸಾವಿನ ಬೆಲೆಯನ್ನು ಅರಿತುಕೊಳ್ಳ ಲೆಂಬಂತೆ ಅವರ ಕಣ್ಣಿನ ಮುಂದೆಯೇ ನಡೆದ, ಕರಿಯ ಬೆಕ್ಕೊಂದು ಅಳಿಲನ್ನು ಹಿಡಿದು ತಿಂದ ಪ್ರಸಂಗ. ಇದನ್ನು ನೋಡಿಯೂ ಕಾವ್ಯಯೋಗದಲ್ಲಿ ತನ್ಮಯರಾಗಿದ್ದ ಪುಟ್ಟಪ್ಪ ನವರು ಅದರಿಂದ ಎಚ್ಚತ್ತಾಗ 'ನನಗೆ ಮೃತ್ಯು ದರ್ಶನ ವಾಯಿತು' ಎಂದು ಹೇಳಿದ್ದಾರೆ.

ಪುಟ್ಟಪ್ಪನವರು ಶ್ರೀರಾಮಕೃಷ್ಣಾಶ್ರಮದಲ್ಲಿ ಇದ್ದಾಗ ಅವರು ಬಹುಕಾಲದಿಂದ ಅರಸುತ್ತಿದ್ದ ಗುರು-ಅಧ್ಯಾತ್ಮದ ಹಸಿವನ್ನು ಹಿಂಗಿಸಿದ ಗುರು-ದೊರೆತುದು ಅವರ ಜೀವನದ ಇನ್ನೊಂದು ಪ್ರಮುಖ ಘಟನೆ. ಅವರು ಮಹಾಪುರುಷರೆಂದು ಕರೆಸಿಕೊಳ್ಳುತ್ತಿದ್ದ-ಶ್ರೀರಾಮಕೃಷ್ಣ ಪರಮಹಂಸರ ಅಂತ ರಂಗ ಭಕ್ತರಲ್ಲಿ ಅದ್ವಿತೀಯರಾಗಿದ್ದ ಸ್ವಾಮಿ ಶಿವಾನಂದರಲ್ಲಿ ತಮ್ಮ ಗುರುವನ್ನು ಕಂಡರು. ಅವರು ಕನ್ನಡದ ಈ ಕಂದನಿಗೆ ಸರಳ ಜೀವನದ ಮುಗ್ಧತೆಯನ್ನು ಕಲಿಸಿಕೊಟ್ಟರು. ಪುಟ್ಟಪ್ಪ ನವರು ದಕ್ಷಿಣೇಶ್ವರಕ್ಕೆ ಹೋಗಿದ್ದಾಗಲೇ ಮಾಸ್ಟರ ಮಹಾ ಶಯರೆಂಬ ಯೋಗಿಸದೃಶ ಮಹಾನ್ ವ್ಯಕ್ತಿಯನ್ನು ಸಂದರ್ಶಿ ಸಿದರು. ಅವರನ್ನು ಕಂಡು 'ಸದಾ ಈಶ್ವರನಲ್ಲೇ ಬಾಳಿ ಬದುಕಿದ ಮಹಾ ದೇವಮಾನವನನ್ನು ಕಂಡಂತಾಯಿತು' ಎಂದು ಅವರು ಒಂದುಕಡೆ ಬರೆದಿದ್ದಾರೆ.

ದಕ್ಷಿಣೇಶ್ವರದ ಪುಣ್ಯ ಪುರುಷ ಶ್ರೀ ರಾಮಕೃಷ್ಣ ಪರಮ ಹಂಸರ ಪ್ರಭಾವವನ್ನು ನಾವು ಪುಟ್ಟಪ್ಪನವರ ಆರಂಭದ ಬರ ಹಗಳೆಲ್ಲದರಲ್ಲೂ ಕಾಣಬಹುದಾಗಿದೆ. "ನನ್ನ ಧ್ಯೇಯ ವೊದಲಿ

ನಿಂದಲೂ ಆಧ್ಯಾತ್ಮಿಕವೇ. ಸಾಹಿತ್ಯ ಸೇವೆ ಒಂದು ಮುಕ್ತಿ
ಎಂದು ಅವರು ಹೇಳಿದ್ದಾರೆ. ಪರಮಹಂಸರು ಧ್ರು
ತಾರೆಯಾಗಿ ನಿಂತು ಅವರ ಜೀವನವನ್ನು ಉಚ್ಚ ಆದರ್ಶದ
ನಡೆಸಿದರೆಂದೇ ಪುಟ್ಟಪ್ಪನವರು 'ಶ್ರೀರಾಮಾಯಣ ದರ್ಶನ
ದಂತಹ ಮೇರುಕೃತಿಯನ್ನು ಬರೆಯಲು ಸಾಧ್ಯವಾಯಿತು.

ಪುಟ್ಟಪ್ಪನವರು ಶ್ರೀ ರಾಮಕೃಷ್ಣಾಶ್ರಮವನ್ನು ಬಿ
ಮೇಲೆ ಸಂಸಾರಿಯಾದರು. ಅವರು ತಮ್ಮ ಬಂಧುಗಳಲ್ಲ
ಹೇಮಾವತಿ ಎಂಬುವರನ್ನು ಕೈಹಿಡಿದು, ಇಂದು ನಾಲ
ಮಕ್ಕಳ ತಂದೆಯಾಗಿದ್ದಾರೆ. ಇವರಲ್ಲಿ ಎರಡು ಗಂಡು, ಎರ
ಹೆಣ್ಣು. ತೇಜಸ್ವಿ, ಚೈತ್ರ, ಇಂದುಮತಿ ಮತ್ತು ತಾರಿ
ಇವರೇ ಮಕ್ಕಳು. ಇವರಲ್ಲಿ ಹಿರಿಯವನಾದ ತೇಜಸ್ವಿ ಇಂಟ
ಕಲಿಯುತ್ತಿದ್ದಾನೆ. ಪುಟ್ಟಪ್ಪನವರ ಪಾಲಿಗೆ ಸಂಸಾರ ಹೇ
ವಲ್ಲ. 'ಜಗದೀಶ್ವರನೆ ವಿಶ್ವ ಸಂಸಾರಿಯಾಗಿರಲು ಸಂಸ
ಪಾಶವೆಂದನಬೇಡವೈ' ಎಂದು ಅವರು ಹೇಳಿದ್ದಾರೆ. "ಕ
ನಲಿ ಶಿವನ ಕಾಣುವಬಂಧನವೆ ಮುಕ್ತಿ: ತಪಕೊಲ್ಲದು
ತಾಯ್ತನಕ್ಕೆ ಸಾಧ್ಯವೈ" ಎಂದು ಸಂಸಾರದ ಹೆಗ್ಗ
ಯನ್ನು ಎತ್ತಿತೋರಿಸಿದ್ದಾರೆ. ಅವರ ಭಾಗಕ್ಕೆ ತಮ್ಮ ನಾಲ್ಕ
ಮಕ್ಕಳು ನಾಲ್ಕು ಬೆರಳಾದರೆ ಸಹಧರ್ಮಿಣಿ ಸತಿ ಹೆಬ್ಬೆರ
ಗಿದ್ದಾಳೆ. 'ಶ್ರೀ ಗುರುವಾಶೀರ್ವಾದದಲಿ ಕವಿಗೀ ಸಂಸಾ
ಪೂಜೆ, ಪೂಜೆಯೆ ಸಂಸಾರದ ಓಜೆ!"

ಪುಟ್ಟಪ್ಪನವರು ಆಶ್ರಮ ಜೀವನದಲ್ಲಿದ್ದಾಗ ಕಂಡ ಆ
ಜೀವನದ ಹೊಂಗನಸು ಅವರು ಮುಂದೆ ರಚಿಸಿದ 'ಕಾನೂ

ಸುಬ್ಬಮ್ಮ ಹೆಗ್ಗಡತಿ'ಯಲ್ಲಿ ಪಡಿನೆಳಲಾಗಿ ಮೂಡಿದೆ. ಅಲ್ಲಿ ಬರುವ ಹೂವಯ್ಯನ ಚಿತ್ರ—ಪುಟ್ಟಪ್ಪನವರ ಚಿತ್ರವೇ ಎಂದು ಭ್ರಮಿಸುವಷ್ಟು ಜೀವಂತವಾಗಿದೆ. ಅಂತೂ “ಪುಟ್ಟಪ್ಪನವರು ಶ್ರೀರಾಮಕೃಷ್ಣ ನಿಲಯದಲ್ಲಿ ಇದ್ದರೂ ಆ ಮಠಕ್ಕೆ ದಕ್ಕಲಿಲ್ಲ. ರಾಮಕೃಷ್ಣ ಪರಮಹಂಸರು ಅವರನ್ನು ಕೃಪೆಯಿಂದ ಬಿಟ್ಟು ಕೊಟ್ಟರು. ಒಳಗೆ ಕವಿತಾಪ್ರವೃತ್ತಿ ಜೀವನದಿಯಂತೆ ಉಕ್ಕು ತ್ತಿರುವಾಗ ನಿವೃತ್ತಿಮಾರ್ಗ ಸಿದ್ಧಿಸುವುದು ಹೇಗೆ? ಇಂದಿಗೂ ಅವರ ಒಳಮೈ ವೇದಾಂತದ್ದೇ. ತಾವು ಒಂದು ಕಾರು ಕೊಂಡು ಕೊಂಡರೆ ಶಕ್ತಿದೇವತೆ ತಮ್ಮನ್ನು ನಡೆಸಲು ಬಂದಳು ಎನಿಸು ತ್ತದೆ ಅವರಿಗೆ; ಮನೆಯ ಅಂಗಳದಲ್ಲಿ ಒಂದು ಸುಂದರವಾದ ಹೂ ಅರಳಿದರೆ ಅದು ಆನಂದ ಸ್ವರೂಪನಾದ ಪರಮಾತ್ಮನ ವಿಕಾಸವೆನಿಸುತ್ತದೆ. ಈ ಅನುಭವವು ಕವಿತೆಯಾಗಿ ಹೊಮ್ಮು ತ್ತದೆ. ಒಂದೊಂದು ಸಾರಿ ಈ ಸಹಜವಾದ ದಿವ್ಯ ಕವಚವನ್ನು ಅವರು ಎಲ್ಲಿ ಮೊಗಚಿ ತೊಟ್ಟುಕೊಂಡು ಬಿಡುತ್ತಾರೋ, ವೇದಾಂತ ಹೊರಮುಖವಾಗಿ, ಕವಿತೆ ಅಂತರ್ಮುಖವಾಗಿ ಬಿಡು ವುದೋ ಎಂದು ನನಗೆ ಸಂಶಯ ಉಂಟಾಗುತ್ತದೆ. ಹಾಗಾದರೆ ಅವರ ಪದ್ಯವೂ ಅರವಿಂದರ ಲೇಖನದಂತೆ ನಿಗೂಢವಾಗಿ ಬಿಡು ತ್ತದೆ. ಅವರು ಅರವಿಂದರಾಗುವುದು ಬೇಡ. ರವೀಂದ್ರರಾ ಗಿಯೇ ಇರಲಿ” ಎಂದು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಪುಟ್ಟಪ್ಪನವರ ಅಂತರಂಗದ ಹೊಳಹನ್ನು ಬಿಡಿಸಿ ತೋರಿಸಿ ದ್ದಾರೆ.

ಪುಟ್ಟಪ್ಪನವರಿಗೆ ಸಭೆ ಸನ್ಮಾನಗಳೆಂದರೆ ಮೊದಲಿ

ನಿಂದಲೋ ದೂರ ! ಅವರ ಭಾಗಕ್ಕೆ ಕೀರ್ತಿ ಎಂಬುದು
ಇದ್ದರಿತ್ತು. ಈ ಶನಿ ಒಲಿದು ಬರುವಾಗ ಯಾರೆಷ್ಟು ಬ
ವೆಂದರೂ ಬಿಡುವನೇ ? ಪುಟ್ಟಪ್ಪನವರೂ ಇದರಿಂದ ತ
ಕೊಳ್ಳಲಾಗಲಿಲ್ಲ.

ಅವರು ಇನ್ನೂ ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ಮೇ
ಗತಿಯ ಕವಿ ಎಂಬ ಹೆಸರಿಗೆ ಪಾತ್ರರಾದ ಮೇಲೆ—ವಿದ್ಯಾ
ಕವಿಸಮ್ಮೇಳನವೊಂದು ಬೆಂಗಳೂರಿನಲ್ಲಿ ಸೆಂಟ್ರಲ್ ಕಾಲೇ
ಕರ್ನಾಟಕ ಸಂಘದ ಆಶ್ರಯದಲ್ಲಿ ನಡೆಯಿತು. ಇ
ಪುಟ್ಟಪ್ಪನವರೇ ಅಧ್ಯಕ್ಷರಾಗಿ ಆಯ್ಕೆಹೊಂದಿದರು.

ಅವರು ವಿದ್ಯಾರ್ಥಿ ಕವಿಗಳ ಅಧ್ಯಕ್ಷರಾಗಿ ಬಹು
ಜನಪ್ರಿಯ ಕವಿಗಳಾದರು. ಅಂದಿನ ಪುಟ್ಟಪ್ಪನವರ
ನನ್ನು ಅಷ್ಟಣ್ಣರು ಹೇಗೆ ಚಿತ್ರಿಸಿದ್ದಾರೆ:

"ರಾತ್ರಿಗೆ ಅವರು ಮಳೆ ಅರಳುವ ಜಾಜಿಯ ಹಾಗೆ ಇದ್ದ
ಶುಭ್ರವಾದ ಬಿಳಿಯ ಖಾದಿ ಪಟ್ಟೆ, ಮೇಲು ವಸ್ತ್ರ; ಅರಳು
ಯೌವನ, ಪ್ರಸರಿಸುತ್ತಿದ್ದ ಹೆಸರಿನ ದಳಗಳು."

ಅದೇ ವರ್ಷ ಬಿ. ಎಂ. ಶ್ರೀ ಅವರ ಸುವರ್ಣ ಪ
ಪ್ರಥಮ ಬಾರಿಗೆ ಪುಟ್ಟಪ್ಪನವರ 'ಬೊಮ್ಮನ ಹಳ್ಳಿ
ಕಿಂದರಿಜೋಗಿ'ಗೆ ದೊರಕಿತ್ತು ಅದು ಎಲ್ಲರ ಬಾಯಲ್ಲಿ ಇ
ಅದನ್ನು ಹಾಡಿದವರ ಚಿತ್ರಮಯ ಶೈಲಿ, ಕಥಾನಕಗ
ಮರುಳಾಗದವರು ಆಗ ಯಾರೂ ಇರಲಿಲ್ಲ. ಅವರು ಅಂದಿನ
ಗೋಷ್ಠಿಯಲ್ಲಿ ತಮ್ಮ 'ಕಲ್ಕಿ'ಯನ್ನು ಓದಿದರು. ಅವರ ತನ್

ಆವೇಶದೊಡನೆ ಹರಿಸುವ ಮೋಹಕ ಮಾಯೆ, ಮುಂಗಾರು ಗುಡುಗಿನಂಥ ಗಂಡು ದನಿ ಇವುಗಳಿಂದ ಅಂದಿನ ಹರಣ ಚಿರ-ಸ್ಮರಣೀಯವಾಗಿತ್ತು. ಆ ಕಾಲದಲ್ಲಿ ಅವರು ಬೆಂಗಳೂರಿಗೆ ಬಂದರೆಂದು ಕೇಳಿದರೆ, ಅವರನ್ನು ಕರೆದುಕೊಂಡು ಹೋಗಿ ಪದ್ಯಗಳನ್ನು ಓದಿಸುತ್ತಿದ್ದರು. ಅವರ ಕವನಗಳನ್ನು ಕೇಳು ವುದು ತಮ್ಮ ಭಾಗ್ಯವೆಂದು ಜನ ತಿಳಿದಿದ್ದರು. 'ಅವರ ಕವಿತೆ ಗಳನ್ನು ಅವರ ಬಾಯಿಂದಲೇ ಕೇಳಬೇಕು—ಆಗಲೇ ಅದರ ಇನಿ ದನಿ, ತನಿವೆಳಗು ತೀಕ್ಷ್ಣ ತೇಜಸ್ಸು, ಘನ-ಗಾಂಭೀರ್ಯ ಗಳು ಕಂಡುಬಂದಾವು !' ಎಂದು ಪ್ರೊ. ಎ.ಆರ್.ಕೃಷ್ಣಶಾಸ್ತ್ರಿ ಗಳು ಹೇಳಿದ್ದಾರೆ.

ಪುಟ್ಟಪ್ಪನವರು ಕಾವ್ಯವನ್ನು ಓದುವಾಗ ಉಂಟಾಗುವ ಭಾವಸಮಾಧಿಯ ಬಗ್ಗೆ ಶ್ರೀ ದ. ಬಾ. ಕುಲಕರ್ಣಿಯವರು ಸ್ವಾರಸ್ಯವಾಗಿ ಬರೆದಿದ್ದಾರೆ : "ಹುಬ್ಬಳ್ಳಿಯ ಸಾಹಿತ್ಯ ಸಮ್ಮೇ ಳನಕ್ಕೆ ಪುಟ್ಟಪ್ಪನವರು ಬಂದಿದ್ದರು. ಅವರು ಆಗ 'ಕಲ್ಕಿ' ಕವನವನ್ನು ಓದಿದರು. ಅವರ ಒಂದು ಪಕ್ಕದಲ್ಲಿ ಪುರುಷರೂ ಇನ್ನೊಂದು ಕಡೆ ಸ್ತ್ರೀಯರೂ ಕುಳಿತಿದ್ದರು. ಪುಟ್ಟಪ್ಪನವರು ತಮ್ಮ ಗಂಭೀರ ಸ್ವರದಲ್ಲಿ ಪುರುಷ ಸಭೆಯ ಕಡೆಗೊಮ್ಮೆ ಸ್ತ್ರೀ ಸಭೆಯ ಕಡೆಗೊಮ್ಮೆ ಮುಖಹೊರಳಿಸಿ ಒಂದೊಂದೇ ಪಂಕ್ತಿ ಯನ್ನು ಉಚ್ಚರಿಸುತ್ತಿದ್ದರು. "ಆ ಕಡೆ ಉದ್ಯಾನ, ಈ ಕಡೆ ಸ್ಮಶಾನ" ಎಂದರು. ಪುನಃ "ಪೀತಾಂಬರಗಳ ಹೊದೆ ಯುವರಲ್ಲಿ" ಎಂದಾಗ ಅಲ್ಲಿಯೇ ಪೀತಾಂಬರವನ್ನು ಹೊದ್ದ ವರೆಲ್ಲ ಇರುವರೋ ಎಂಬಂತೆ ಪುರುಷರ ಕಡೆ ನೋಡಿದರು.

ಕೊನೆಯ ಸಾಲಿನ "ಕೌಪೀನಕ್ಕೆ ಚಿಂದಿಯು ಸಿಗಲಿಲ್ಲ
ಎಂದಾಗ ನಿಜವಾಗಿ ಪೀತಾಂಬರಗಳನ್ನೇ ಉಟ್ಟ ಸ್ತ್ರೀಯ
ಕಡೆ, ಅಲ್ಲಿಯೇ ತಾವು ಹೇಳುತ್ತಿರುವ ವಸ್ತುವನ್ನು ನಿರ್ದೇ
ಸುವಂತೆ, ಅವರ ಮುಖ ನೋಡಿತ್ತು. ಆದರೆ ಯಾರೂ
ಲಿಲ್ಲ; ಈ ಪ್ರಮಾದವನ್ನು ಗಮನಿರಲಿಕ್ಕಿಲ್ಲ ಕೂಡಾ!

ಪುಟ್ಟಪ್ಪನರು 'ಗೋಮಟೇಶ್ವರ' ಕವನದಲ್ಲಿ '
ಇದ್ದರಿಲ್ಲಿ ನಗು, ನೋಡುವಂ' ಎಂದು ಆಹ್ವಾನವಿತ್ತಿದ್ದಾ
ಸ್ವತಃ ಅವರೇ ಬಂದು ಗೋಮಟೇಶ್ವರ; ನಗ್ನತೆಗೂ ಗಾಂಭ
ರ್ಯಾದಾನ ಮಾಡುವ ಆ ಸನ್ನಿಧಾನದಲ್ಲಿ ನಗುವ
ಯಾರಿಗೆ?"

ಒಂದು ಭಾರಿ ಪುಟ್ಟಪ್ಪನವರು ಶ್ರೀರಂಗಪಟ್ಟಣದ
ದಿವಂಗತ ಬಿ. ಎಂ. ಶ್ರೀ ಅವರ ಅಧ್ಯಕ್ಷತೆಯಲ್ಲಿ ಕಾವ್ಯವಾ
ಚನ ಮಾಡಿದರು. ಅದನ್ನು ಮುಗಿಸಿ ಹೊರಗೆ ಬಂದ
ಅವರ ಕಾವ್ಯವಾಚನವನ್ನು ಕೇಳಿ ಮಾರುಹೋಗಿ
ಸುಮಾರು ೬೦ ವರ್ಷದ ಮುದುಕರೊಬ್ಬರು ಬಂದು ಅವರ
ಬಾಚಿ ತಬ್ಬಿಕೊಂಡು "ನೀನೊಬ್ಬ ಮಹಾಪುರುಷ. ನಿನ್ನಿ
ಮಹತ್ಕಾರ್ಯ ನಡೆಯಲಿದೆ. ನೀನು ನೂರುವರ್ಷ ಬಾಳ
ಎಂದು ಆನಂದಾಶ್ರು ಸುರಿಸುತ್ತಾ ಆಶೀರ್ವದಿಸಿದರಂತೆ.

ಪುಟ್ಟಪ್ಪನವರ ಬಾಯಿಂದಲೇ, ಅವರು ಬರೆಯುತ್ತಿ
'ಶ್ರೀರಾಮಾಯಣದರ್ಶನ' ಕಾವ್ಯ ಕೇಳುವ ಸಲುವಾಗಿ ಅ
ಗುರುಗಳಾದ ದಿವಂಗತ ಟಿ. ಎಸ್. ವೆಂಕಣ್ಣಯ್ಯನವರು
ಬಿಸಿಲಿನಲ್ಲಿ ನಡೆದು ಅವರ ಮನೆಗೆ ಬರುತ್ತಿದ್ದರಂತೆ. ಅವ

ಪುಟ್ಟಪ್ಪನವರು ಇಟ್ಟಿದ್ದ ಗುರುಭಕ್ತಿಗೆ ಅವರು ಶ್ರೀರಾಮಾಯಣ ದರ್ಶನವನ್ನು ವೆಂಕಣ್ಣಯ್ಯನವರಿಗೆ ಅರ್ಪಿಸಿರುವುದೇ ಸಾಕ್ಷಿ.

ಯಾವಾಗ ಹೋದರೂ ಇಲ್ಲವೆನ್ನದೆ, ಪುಟ್ಟಪ್ಪನವರು ತಮ್ಮ ಕವನಗಳನ್ನು ಓದಿ ಬಂದವರನ್ನು ಸಂತೋಷಪಡಿಸುತ್ತಿದ್ದರೆಂದು ಶ್ರೀ ಎಚ್. ಎಂ. ಶಂಕರನಾರಾಯಣರಾವ್ ಒಂದೆಡೆ ಬರೆದಿದ್ದಾರೆ.

"ಕಾವ್ಯಾನಂದ, ಜೀವಾನಂದ, ಬ್ರಹ್ಮಾನಂದಗಳನ್ನು ಹೃದಯದಲ್ಲಿ ತುಂಬಿಕೊಂಡು ಹಕ್ಕಿಯಂತೆ ಸುಖವಾಗಿಹಾಡುವವರು ಶ್ರೀ ಪುಟ್ಟಪ್ಪನವರು" ಎಂದು ಬಿ. ಎಮ್. ಶ್ರೀ ಅವರು ಒಂದೆಡೆ ಬರೆದಿದ್ದರು.

"ಸಾಹಿತ್ಯ ರಚನೆಯ ಕ್ಷೇತ್ರದಲ್ಲಿ ಪುಟ್ಟಪ್ಪನವರ ಪ್ರತಿಭೆ ಅಪೂರ್ವ ವೈವಿಧ್ಯತೆಯನ್ನು ಪ್ರದರ್ಶಿಸಿದೆ" ಎಂದು ಶ್ರೀ ದಿವಾಕರರು ಅಭಿಪ್ರಾಯಪಟ್ಟಿದ್ದಾರೆ.

ಪುಟ್ಟಪ್ಪನವರ ಸಾಹಿತ್ಯದ ವಿಸ್ತಾರವನ್ನೂ ವೈವಿಧ್ಯತೆಯನ್ನೂ ಮನಗಂಡು ಶ್ರೀ ಜಿ. ಪಿ. ರಾಜರತ್ನಂ ಅವರನ್ನು ಟೈಟನ್-ದೈತ್ಯನೆಂದು ಒಂದೆಡೆ ಕರೆದಿದ್ದಾರೆ. ಪುಟ್ಟಪ್ಪನವರೂ ತಮ್ಮ ಶೈಲಿಯನ್ನು ದೈತ್ಯಶೈಲಿಯೆಂದು ಹೇಳಿಕೊಂಡಿದ್ದಾರೆ. ಈ ಮಾತು ಅಕ್ಷರಶಃ ನಿಜ.

ಪುಟ್ಟಪ್ಪನವರು ಒಮ್ಮೆ ಕಾರಂತರ ಬಗ್ಗೆ ಪರಿಚಯ ಮಾಡಿಕೊಡುತ್ತ 'ಆಡುಮುಟ್ಟದ ಸೊಪ್ಪಿಲ್ಲ, ಕಾರಂತರು ಕೈಹಾಕದ ಸಾಹಿತ್ಯಕ್ಷೇತ್ರವಿಲ್ಲ' ಎಂದು ಹೇಳಿದ್ದರು. ಈ

ಮಾತು ಪುಟ್ಟಪ್ಪನವರಿಗೂ ಅಕ್ಷರಶಃ ಒಪ್ಪುತ್ತದೆ. ಅವ
ಸಾಹಿತ್ಯದ ವ್ಯಾಪ್ತಿ ವಿಶಾಲವಾದುದು. ಅವರು ಕಥೆ
ಕಾದಂಬರಿ, ಏಕಾಂಕ ನಾಟಕ, ರುದ್ರನಾಟಕ, ಸುಖಾಂ
ನಾಟಕ, ಪ್ರಬಂಧ, ಚಿತ್ರ, ವಿಮರ್ಶೆ. ಸ್ವಚ್ಛಂದ ಛಂದ
ಭಾವಗೀತೆ, ಪ್ರಣಯಗೀತೆ, ಅಷ್ಟಷಟ್ಪದಿ, ವಚನ, ಕಥನ-
ಕವನ, ಮಹಾಕಾವ್ಯಗಳು—ಜೀವನ ಚರಿತ್ರೆ, ಕಡೆಗೆ ಶಿಶು
ಸಾಹಿತ್ಯ-ಎಲ್ಲ ಪ್ರಕಾರಗಳಲ್ಲೂ ಕೈಯಾಡಿಸಿದ್ದಾರೆ. ಮಾತ್ರವ
ತಾವು ಮುಟ್ಟಿದುದನ್ನೆಲ್ಲಾ ಹೊನ್ನಾಗಿಸಿದ್ದಾರೆ. ಅವರು ತಮ್ಮ
೬೦ ವರ್ಷಗಳ ಸಾಹಿತ್ಯ ಜೀವನದಲ್ಲಿ ಸುಮಾರು ೫೦ ಕೃ
ಗಳನ್ನು ರಚಿಸಿದ್ದಾರೆ. ಇವುಗಳನ್ನು ಸಂಗ್ರಹಿಸಿದರೆ ಕ್ರೌನ
ಅಷ್ಟದಳದ ಸುಮಾರು ೫,೫೦೦ ಪುಟಗಳಾಗುತ್ತವೆ. ಅವರ
೩೦೦ಕ್ಕೂ ಹೆಚ್ಚಿನ ಕವಿತೆಗಳನ್ನು ಬರೆದಿದ್ದಾರೆ. ಸುಮಾರ
೨೪,೮೦೦ ಸಾಲುಗಳಷ್ಟು ಸರಳ ರಗಳೆಯನ್ನು ಬರೆದಿದ್ದಾರೆ
ಇಂದು ಪುಟ್ಟಪ್ಪನವರ ಗ್ರಂಥಭಂಡಾರವನ್ನು ಕೊಳ್ಳಬೇಕಾದ
೧೦೦ ರೂಪಾಯಿಗಳೇ ಬೇಕಾಗುತ್ತದೆ. ಇಷ್ಟು ಗ್ರಂ
ಬಾಹುಳ್ಯವುಳ್ಳ, ಗುಣಾಧಿಕ್ಯವುಳ್ಳ ಸಾಹಿತ್ಯ ಸೃಷ್ಟಿಯು ಇತ
ದೇಶೀಯ ಸಾಹಿತ್ಯದಲ್ಲಿ ಬಹುಕಡಿಮೆ ಪ್ರಮಾಣದಲ್ಲ
ನಡೆದಿದೆ. ದಿವಂಗತ ರವೀಂದ್ರನಾಥ ಠಾಕೂರರು ಒಟ್ಟು
೧೪,೦೦೦ ಪುಟಗಳಷ್ಟು ಸಾಹಿತ್ಯ ರಚಿಸಿದ್ದರೆಂದ
ಒಮ್ಮೆ ರಮಾನಂದ ಚಟರ್ಜಿಯವರು ಅಂದಾಜು ಮಾ
ಡ್ಡರು. ರವೀಂದ್ರರು ತೀರಿಕೊಂಡ ಮೇಲೆ ವಿಶ್ವಭಾರ
ಪತ್ರಿಕೆಯಲ್ಲಿ ಶ್ರೀರಂಗರು ಒಂದು ಲೇಖನ ಬರೆಯುತ್ತಾ

ತರವಾದ ರವೀಂದ್ರರ ಸ್ಥಾನವನ್ನು ತುಂಬಬಲ್ಲ ಬೇರೊಬ್ಬ ಅರ್ಹವ್ಯಕ್ತಿ ಇದ್ದರೆ ಅದು ಪುಟ್ಟಪ್ಪನವರು ಎಂದು ಹೇಳಿದ್ದಾರೆ. ಪುಟ್ಟಪ್ಪನವರು ತಮ್ಮ ಕಾವ್ಯಗುಣಾಧಿಕ್ಯದಿಂದಲೂ ಗ್ರಂಥಬಾಹುಳ್ಯದಿಂದಲೂ, ರವೀಂದ್ರನಾಥ ಠಾಕೂರರು ತಮ್ಮ ೮೦ ವರ್ಷಗಳ ತುಂಬು ಜೀವನದಲ್ಲಿ ಸಾಧಿಸಿದುದನ್ನು ಈ ವೇಳೆಗೇ ಸಾಧಿಸಿದ್ದಾರೆ. ಪುಟ್ಟಪ್ಪನವರು ಆ ವಯಸ್ಸಿಗೆ ಏನನ್ನು ಸಾಧಿಸುವರೆಂದು ಹೇಳುವ ಎದೆಗಾರಿಕೆ ಯಾರಿಗಿದೆ ?

ಪುಟ್ಟಪ್ಪನವರ ಬಗ್ಗೆ ಬರೆಯುತ್ತಾ, ಬಂಗಾಲದ ಆಚಾರ್ಯ ನರೇಂದ್ರದೇವರು ಹೀಗೆ ಹೇಳಿದ್ದರು.

"ದೆಹಲಿ ಕವಿಗಿತ್ತಿರುವ ಅಕೆಡಮಿಯ ಬಹುಮಾನ ಮಿಗಿಲೇನು ನಮ್ಮೀ ಮಹಾಕವಿ ಕುವೆಂಪುವಿಗೆ ? ತನ್ನ ಹಿರಿಮೆಯು ನೆಲದ ಜನಮನದ ಜಯಘೋಷದೌನ್ನತ್ಯಕ್ಕೇರಿಪುದೆ ಈ ವೊಂದು ಹಿರಿ ಕೊಡುಗೆ ? ಅಜ್ಞಾತ ಮಿತ್ರನಿಂದಕುಟಿಲ ಮನಸ್ಕನಿಂದರ್ಪಿಸುವ ಸಂಸ್ತುತಿಯ ರೂಪದಿಂ ಬಂಗಾಳ ಭಕ್ತಿ ಪ್ರಣಾಮವಂ ಸಂತಸದಿ ಸಲಿಸುತಿದೆ. 'ಶ್ರೀ ರಾಮಾಯಣ ದರ್ಶನಂ' ಮೇರುಕೃತಿಗೆ !

ಮಹಾರಾಷ್ಟ್ರದ ಸುಪ್ರಸಿದ್ಧ ಲೇಖಕರಾದ ಮಾಮಾ ವರೇರಕರರು ಕುವೆಂಪುರವರನ್ನು ಗರುಡಪಕ್ಷಿಗೆ ಹೋಲಿಸಿದ್ದಾರೆ. ಗರುಡ ಪಕ್ಷಿಯು ಸದಾ ಊರ್ಧ್ವಗಾಮಿ. ಅಂತೆಯೇ ಪುಟ್ಟಪ್ಪನವರು ತಮ್ಮ ಪ್ರತಿಯೊಂದು ಕೃತಿಯಿಂದ ಮೇಲೇರುತ್ತಿದ್ದಾರೆ. ಅವರನ್ನು ಮಲೆಯಾಳದ ಶ್ರೇಷ್ಠ ಕವಿ ವಲ್ಲತ್ತೋಳರು ಮಹಾಕವಿ ಎಂದು ಕರೆದು ಗೌರವಿಸಿದ್ದಾರೆ.

“ ಪುಟ್ಟಪ್ಪನವರು ಶಾಲೆಯಲ್ಲಿ ಕಲಿತುದುದು ಅಲ್ಪ, ಆದರೆ ಹೊರಗೆ ಕಲಿತುದೇ ಅಪಾರ. ಗಿಡ, ಬಳ್ಳಿ, ಗಿರಿ,ನದಿ, ಕಂದರ, ರವಿ, ಶಶಿ, ತಾರೆ, ಕಾಜಾಣ, ಕೋಗಿಲೆ ಇವು ಒಂದೊಂದೂ ಅವರಿಗೆ ಗುರುವಾಗಿ ಅವರನ್ನು ಸೃಷ್ಟಿಸಿವೆ” ಎಂದು ಶ್ರೀ ಜವರೇಗೌಡರು ಹೇಳಿದ್ದಾರೆ. ಅವರ ಭಾವುಕ ದೃಷ್ಟಿಗೆ ಮಲೆನಾಡಿನ ಅಚೇತನ ವಸ್ತುಗಳಲ್ಲೂ ಚೇತನ ತುಂಬಿದೆ. ಅವರ ಭಾಗಕ್ಕೆ ಕಲ್ಲು- ಶಿಲೆಯಲ್ಲ. ‘ಶಿಲಾ ತಪಸ್ವಿ’ ಎಂಬ ತಮ್ಮ ದೊಂದು ಕವನದಲ್ಲಿ ಜಡವೂ ಚೇತನದ ಒಂದು ಮುಖವೆಂಬು ದನ್ನು ಎತ್ತಿತೋರಿಸಿದ್ದಾರೆ. ಅಂತೆಯೇ ಅವರ ರಸದ ಕಣ್ಣಿಗೆ ಒಂದು ಗುಲಾಬಿಯ ಹೂ ಅರಳುವುದೂ ಆತ್ಮಾನಂದವನ್ನು ಉಂಟುಮಾಡುತ್ತದೆ. ಅವರಿಗೆ ಪ್ರಕೃತಿಯ ಆರಾಧನೆಯೇ ಪರಮನ ಆರಾಧನೆ. “ ಅವರಿಗೆ ಪ್ರಕೃತಿಯೇ ಸಂಗಾತಿ, ಪ್ರಕೃತಿಯೇ ಸ್ಫೂರ್ತಿ ಶಕ್ತಿ, ಪ್ರಕೃತಿಯೇ ಶಾಂತಿ ತಾಯಿ, ಪ್ರಕೃತಿಯೇ ಗುರು, ಪ್ರಕೃತಿಯೇ ದೇವರ ಸಂಕೇತ, ಪ್ರಕೃತಿಯೇ ದೇವರ ಪ್ರತಿನಿಧಿ ” ಎಂದು ಶ್ರೀ ಪರಮೇಶ್ವರ ಭಟ್ಟರು ಒಂದು ಕಡೆ ಬರೆದಿದ್ದಾರೆ. ಪುಟ್ಟಪ್ಪನವರು ಚಿನ್ಮಯ ಶಕ್ತಿ, ಜಗಜ್ಜನನಿ, ಮಹಾಮಾಯೆಯಾದ ಪ್ರಕೃತಿಯಲ್ಲಿ ಬೇಡುವುದೇನಂದರೆ, “ ನಿನ್ನ ಬಾಂದಳದಂತೆ ನನ್ನ ಮನವಿರಲಿ, ನಿನ್ನ ಸಾಗರದಂತೆ ನನ್ನ ಎದೆ ಇರಲಿ, ನಿನ್ನ ಸುಗ್ಗಿಯತೆರದಿ ನನ್ನ ಸೊಬಗಿರಲಿ, ನಿನ್ನ ಲೀಲೆಯ ತೆರದಿ ನನ್ನ ಬಾಳಿರಲಿ.”

ಪುಟ್ಟಪ್ಪನವರು ಪ್ರಕೃತಿಯನ್ನು ಅದರ ಲಲಿತ, ಭೀಷ್ಮ, ಭೀಷಣ, ರೌದ್ರ ಮುಖಗಳಲ್ಲಿ ನೋಡಿ ಆನಂದಿಸಿದ್ದಾರೆ. ಸುತ್ತ

ಚಿನ್ಮಯೆ ತನ್ನ ಸೌಂದರ್ಯವನ್ನು ಕುವೆಂಪುವಿನ ಕಣ್ಣುಗಳಿಂದ ನೋಡಿಕೊಳ್ಳುತ್ತಿರುವಳೋ ಎಂದು ತೋರುವಂತೆ ಅವರ ಪ್ರಕೃತಿ ಗೀತೆಗಳು ವೈವಿಧ್ಯತೆಯಿಂದ ತುಂಬಿವೆ. ಅವರಿಗೆ ಕಾಜಾಣ, ಕೋಗಿಲೆ, ತೇನೆ, ಗಿಳಿ, ಕಾಮಾಳಿ, ಕೇದಗೆ, ಕೊಳ, ಮಲ್ಲಿಗೆ, ಹುಲಿ, ಹಾವು, ಮಿಗ, ಸರಗ, ಏಳುಸೀಳು, ಸಿಬ್ಬಲಿ ಗುಡ್ಡೆ, ನವಿಲುಕಲ್ಲು, ರಾಮತೀರ್ಥ, ಕವಿಶೈಲ, ಅರೆಕಲ್ಲು, ಅಶೋಕವನ, ಕುಕ್ಕಸಹಳ್ಳಿ ಕೆರೆ, ಒಂಟಿಕೊಪ್ಪಲನೀರ್ದಿಬ್ಬ, ಚಾಮುಂಡಿ, ಲಲಿತಾದ್ರಿ ಇವುಗಳು ಕೇವಲ ಹೆಸರುಗಳು ಮಾತ್ರವಲ್ಲ ಅವು ಒಂದೊಂದೂ ಒಂದೊಂದು ಕಥೆಯನ್ನು ಒಳಗೊಂಡ ಮಂತ್ರದ ನುಡಿಗಳು.

ಒಮ್ಮೆ ಪುಟ್ಟಪ್ಪನವರು ಶ್ರೀ ರಾಮಕೃಷ್ಣಾಶ್ರಮದಲ್ಲಿ ಇದ್ದಾಗ ತಮ್ಮ ಕೊಠಡಿಯಿಂದ, ಪ್ರಭಾತದಲ್ಲಿ ಕ್ರೌಂಚಪಕ್ಷಿಗಳ ಸಾಲನ್ನು ಕಂಡು ಭಾವೋನ್ಮಾದದಲ್ಲಿ ಮೈಮರೆತಿದ್ದರು. ಅವರಿಗೆ ನೂರಾರು ಸಿನೀಮ, ನಾಟಕ ಸಂಗೀತಗಳು ಕೊಡದಷ್ಟು ಆತ್ಮಾನಂದವನ್ನು ಆ ಒಂದು ನೋಟ ಕೊಟ್ಟಿತಂತೆ. ಅಂತೆಯೇ ಕಸಿನ್ಸ್‌ರವರು ದಸರಾ ವಸ್ತುಪ್ರದರ್ಶನದಲ್ಲಿ ಅಣಿಗೈದಿದ್ದ ರೋರಿಕ್ ಚಿತ್ರಗಳನ್ನು ಕಂಡು ಭಾವೋನ್ಮಾದಗೊಂಡು ಆ ಬಗ್ಗೆ ಉತ್ತಮವಾದ ಕವಿತೆಯನ್ನು ಬರೆದಿದ್ದಾರೆ. ಅವರ ರಸ ದೃಷ್ಟಿಗೆ ಸೌಂದರ್ಯಾನುಭೂತಿಗೆ ಎಲ್ಲೆಲ್ಲೂ ಸೌಂದರ್ಯವೇ ಕಾಣುತ್ತದೆ. "ಶಿವ ಕಾಣದೆ ಕವಿ ಕುರುಡನೋ, ಶಿವ ಕಾವ್ಯದ ಕಣ್ಣೋ!" ಎಂದು ಅವರು ಒಂದೆಡೆ ಹೇಳಿದಾರೆ.

ಪುಟ್ಟಪ್ಪನವರ ಕೃತಿಗಳಲ್ಲೆಲ್ಲಾ ಮೇರು ಕೃತಿ ಎಂದರೆ

ಶ್ರೀ ರಾಮಾಯಣದರ್ಶನ. "ಅಭೀಪ್ಸೆ, ಹಾರೈಕೆ, ದೇವತಾ
ಕೃಪೆ, ಪ್ರತಿಭೆಗಳು ಎಂತಹ ಅದ್ಭುತ ಪವಾಡವನ್ನು ಮಾಡ
ಬಲ್ಲವೆಂಬುದಕ್ಕೆ ಇದೊಂದು ನಿದರ್ಶನ"

"ಭಾರತವು ಸ್ವಾತಂತ್ರ್ಯವನ್ನು ಪಡೆದೀಚೆಗೆ ಕನ್ನಡದಲ್ಲಿ
ಪ್ರಕಟವಾಗಿರುವ ಉತ್ಕೃಷ್ಟ ಕೃತಿಗಳಲ್ಲಿ ಶ್ರೀರಾಮಾಯಣ
ದರ್ಶನಕ್ಕೆ ಅಗ್ರಸ್ಥಾನ" ಎಂದು ಶ್ರೀ ತಿ. ನಂ. ಶ್ರೀ ಅವರ
ಹೇಳಿದ್ದಾರೆ.

"ಶ್ರೀರಾಮಾಯಣದರ್ಶನಂ ಎಂದೆಂದಿಗೂ ನಿಲ್ಲುವ ವಿಶ್ವ
ಸಾಹಿತ್ಯ ಕೃತಿ, ಈ ಯುಗದ ಮಹಾಕೃತಿ. ಅವರಂತೆ ಅದ
ಕರ್ತೃ ವಿಶ್ವಕವಿ" ಎಂದು ಶ್ರೀ ಮಿರ್ಜಿ ಅಣ್ಣಾರಾಯರ
ಹೇಳಿದ್ದಾರೆ.

ಕಾಡುಜೀವಿಯಾದ ತಮ್ಮನ್ನು ಅರೂಢೆ, ಅತೀತೆ, ಅನಂ
ಯಾದ ಸರ್ವಭಾಷಾಮಯಿ ಬಹುರೂಪ, ಬಹುಕಾಲ ದೇ
ಗಳನ್ನು ಪಡೆದಿರುವ ಆ ಸರಸ್ವತಿ ಜನಮನದ ಆಸೆ, ಆಕಾಂ
ಅಭೀಪ್ಸೆಗಳಿಂದ, ತಮ್ಮ ಮೂಲಕ ಶ್ರೀ ರಾಮಾಯಣದರ್ಶ
ವನ್ನು ರಚಿಸಿದ್ದಾಳೆಂದೇ ಪುಟ್ಟಪ್ಪನವರ ಅಭಿಪ್ರಾಯ.

"ಶ್ರೀರಾಮಾಯಣದರ್ಶನ ನನ್ನನ್ನು ಸಾಕಿ ಸಲುಹಿ
ಸಹ್ಯಾದ್ರಿ, ವಿದ್ಯೆಕೊಟ್ಟು ಚೇತನ ಕೊಟ್ಟ ಚಾಮುಂಡಿ, ಅಧ
ತ್ಮಿಕ ಚೇತನ ನೀಡಿದ ದಕ್ಷಿಣೇಶ್ವರ, ವಿಶ್ವದ ಸಾಹಿತಿಗಳ
ಸಾಧುಗಳು ಸಂತರು ನೀಡಿದ ಆಶೀರ್ವಾದದ ಫಲ."

"ಶ್ರೀ ರಾಮಾಯಣದರ್ಶನವನ್ನು ನಾನು ರಚಿಸ
ಹೋದರೆ ಶ್ರೀರಾಮ ನನ್ನನ್ನೇ ರಚಿಸಿದ. ಶ್ರೀರಾಮಾಯ

ದರ್ಶನವನ್ನು ನಾನು ರಚಿಸಿದೆನೆನ್ನುವುದು ಲೌಕಿಕ ದೃಷ್ಟಿ. ಅದು ನನ್ನನ್ನು ಸೃಷ್ಟಿಸಿತೆನ್ನುವುದು ವಾಸ್ತವದೃಷ್ಟಿ. ಕಲ್ಲನ್ನು ಉಜ್ಜಲುಹೋಗಿ ಚಾಕು ತಾನೇ ಹರಿತವಾಗುವಂತೆ ನಾನಾಗಿದ್ದೇನೆ" ಎಂದು ಪುಟ್ಟಪ್ಪನವರು ಹೇಳಿದ್ದಾರೆ.

ಇದರ ರಚನೆಗೆ ಒಂಬತ್ತು ವರ್ಷಗಳು ಹಿಡಿದವು. ಆರಂಭದಲ್ಲಿ ಕೇವಲ ೪೦೦೦ ಸಾಲುಗಳಲ್ಲಿ ಮುಗಿಸಬೇಕೆಂದು ಹೊರಟು ಈ ಕೃತಿ ತಾನೇ ತಾನಾಗಿ ಬೆಳೆದು, ಪುಟ್ಟಪ್ಪನವರ ಹದ್ದು ಅಂಕೆಗಳನ್ನು ಮೀರಿಬಿಟ್ಟು ೮೭೬ ಪುಟಗಳ ೨೨, ೨೮೩ ಸಾಲುಗಳ ಬೃಹತ್‌ಕೃತಿಯಾಯಿತು. ಇದರ ಪ್ರಥಮ ಕಲ್ಪನೆ ಬಂದುದು ಕನಸಿನಲ್ಲಿ. ಒಮ್ಮೆ ಪುಟ್ಟಪ್ಪನವರಿಗೆ ಒಂದು ಕನಸು ಬಿದ್ದು ಅದರಲ್ಲಿ ತಾವು ಒಂದು ಮಹಾಕಾವ್ಯವನ್ನು ಬರೆದುದಾಗಿ ಭಾಸವಾಯಿತಂತೆ. ಎಚ್ಚರಾದಾಗ ಕಾವ್ಯವಸ್ತುವಿನ ಬಗ್ಗೆ ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ. ಅದನ್ನು ಹಾಗೇ ಮರೆತು ಬಿಟ್ಟರು. ಅನೇಕ ವೇಳೆ ಅವರ ಕನಸುಗಳೇ ಅವರ ಕವನಗಳಿಗೆ ಸ್ಫೂರ್ತಿಕೊಡುವುದುಂಟು 'ಕೋಗಿಲೆ ಮತ್ತು ಸೋವಿಯಟ್ ರಶಿಯಾ' 'ಕೂಸಿನ ಕನಸು' 'ಕಲ್ಕಿ' ಮತ್ತು 'ರಾವಣನ ಕನಸು'ಗಳೆಲ್ಲವೂ ಕನಸಿನ ರೂಪದಲ್ಲಿ ಮೊದಲು ಮೈತಾಳಿದ ಕೃತಿಗಳು. 'ಕೋಗಿಲೇ ಮತ್ತು ಸೋವಿಯಟ್ ರಶಿಯಾ'ವು ವೆಬ್‌ರವರು ಬರೆದಿದ್ದ 'ಸೋವಿಯಟ ಲ್ಯಾಂಡ್' ಓದಿದುದರ ಪ್ರಭಾವವಂತೆ! ಆದರೆ ಅದು ಒಂದು ವಿಡಂಬನ ಕಾವ್ಯವಾದುದು ಅವರಿಗೇ ಇಂದಿಗೂ ವಿಸ್ಮಯದ ಸಂಗತಿಯಾಗಿದೆ.

ಪುಟ್ಟಪ್ಪನವರಿಗೆ ಇಂಗ್ಲಿಷ ಸಾಹಿತ್ಯದಲ್ಲೆಲ್ಲಾ ಅತಿ ಮೆಚ್ಚಿನ ಕವಿಗಳೆಂದರೆ ವರ್ಡ್ಸ್‌ವರ್ಥ ಮತ್ತು ಮಿಲ್ಟನ್! ಮಿಲ್ಟನ್‌ನನ್ನು ಓದಿಕೊಂಡಮೇಲೆ ಆ ಕಾವ್ಯದ ಬಿರುಸು, ಬೀಸುಗಳನ್ನು ಕನ್ನಡದಲ್ಲಿ ತರಲು ಸಾಧ್ಯವೇ ಎಂದು ಅವರು ಯೋಚಿಸುತ್ತಿದ್ದರು. ಮುಂದೆ 'ಚಿತ್ರಾಂಗದ' ಬರೆದು ಮುಗಿಸಿದ ಮೇಲೆ ಅದೇ ರೀತಿಯಲ್ಲಿ ರಾಮಾಯಣದ ಕಥೆಯನ್ನು ಸರಳ ರಗಳೆಯಲ್ಲಿ ಬರೆಯಲು ಆಶಿಸಿದರು. ಆರಂಭದಲ್ಲಿ ದಾರ್ಶನಿಕ ಕಾವ್ಯ ರಚನೆ ಅವರ ಗುರಿಯಾಗಿರಲಿಲ್ಲ. ಅಂತೆಯೇ ಮಹಾ ಛಂದಸ್ಸಿನ ಬಗ್ಗೆ ತಮಗೇ ತಿಳಿದಿರಲಿಲ್ಲ ಅದನ್ನು ಬರೆಯುತ್ತ ಹೋದಂತೆ ತನಗೆ ತಾನೇ ರೂಪುಗೊಂಡಿತು. "ನನ್ನ ಸಾಧನೆ ಸಾಗಿತು, ಅದು ಬೆಳೆದಂತೆಲ್ಲಾ ನಾನು ಬೆಳೆದೆ. The Epic possessed me. ನಾನು ಬರೆದೆನೆಂದು ಹೇಳುವುದು ತಪ್ಪು:" ಎಂದು ಈ ಬಗ್ಗೆ ಅವರು ಹೇಳಿದ್ದಾರೆ.

"ನನ್ನದೆನ್ನುವುದಕ್ಕಿಂತಲೂ ವಿಶ್ವಶಕ್ತಿಗಳು ಸೇರಿ ಈ ಕಾವ್ಯವಾಗಿದೆ. ನಾನೊಬ್ಬ ಲಿಪಿಕಾರ. ಇಡೀ ಜನಾಂಗದ ಉಸಿರು ಇಲ್ಲಿದೆ" ಎಂದು ಅವರು ಹೇಳಿದ್ದಾರೆ.

ಶ್ರೀರಾಮಾಯಣದರ್ಶನ ಬರೆಯುವವೇಳೆಗೆ ಪುಟ್ಟಪ್ಪನವರಿಗೆ ಶಾಸ್ತ್ರ ಪರಿಚಯ, ಕಾವ್ಯ ಪರಿಚಯ, ವೇದಾಂತಪರಿಚಯಗಳು ಚೆನ್ನಾಗಿ ಆಗಿದ್ದವು. ಖಗೋಳಶಾಸ್ತ್ರ, ಮನಶ್ಶಾಸ್ತ್ರ, ಸೌಂದರ್ಯಶಾಸ್ತ್ರ, ಭೌತಶಾಸ್ತ್ರ, ಪಶ್ಚಾತ್ಯ ಕಾವ್ಯರಾಶಿ ಇವೇ ಮೊದಲಾದವುಗಳ ಜ್ಞಾನ ಸಾಕಷ್ಟು ಲಭಿಸಿತ್ತು. ಆಗ ಅವರು ಹುತ್ತದಲ್ಲಿ ಅಡಗಿದ್ದರೆಂದರೂ ಸರಿ. ಮನೆಬಿಟ್ಟು

ಎಲ್ಲಿಗೂ ಬರುತ್ತಿರಲಿಲ್ಲ. ರಜದಲ್ಲಿ ಊರಿಗೂ ಹೋಗದೆ ಮನೆಯಲ್ಲಿಯೇ ಇರುತ್ತಿದ್ದರು.

ಮಹಾಕಾವ್ಯವೇನೋ ಆರಂಭವಾಗಿತ್ತು. ಆದರೆ ಕೆಲಸ ಮಾತ್ರ ನಿಧಾನವಾಗಿ ಸಾಗಿತ್ತು. ಮೊದಲಿನ ಯೋಜನೆ ೨೦೦ ಪುಟಗಳ ಗ್ರಂಥವಾಗಿತ್ತು. ಆದರೆ ಕಾವ್ಯವು ಅದರ ನಾಲ್ಕು ಪಟ್ಟು ಬೆಳೆಯಿತು. 'ಇದೇನೋ ನನ್ನ ಕೈಮೀರು ವಂತಿದೆ. ಗುರುವಿನಿಚ್ಛೆಯಿದ್ದಂತೆ ಆಗಲಿ ಎಂದು ಬರೆದೆ! ಹತ್ತು ವರ್ಷ ಬರೆದೆ! ಈ ಬೃಹತ್‌ಕೃತಿ ಮೂಡಿತು!' ಎಂದು ಅವರು ಆ ಬಗ್ಗೆ ಹೇಳಿದ್ದಾರೆ.

ಮೊದಲು ಬುದ್ಧಿಪೂರ್ವಕವಾಗಿ ಬರೆಯಲು ತೊಡಗಿದ ಕಾವ್ಯ ಅದರ ಅಂಕೆ ತಪ್ಪಿ ತನಗೆ ತಾನೇ ರೂಪುಗೊಂಡಿತು. ಶ್ರೀ ರಾಮಾಯಣದರ್ಶನದ ೫೦೦೦ ಸಾಲುಗಳನ್ನು ಬರೆದು ಮುಗಿಸಿದ್ದಾಗ್ಗೆ ಸುಮಾರು ೧೯೪೨ ರಲ್ಲಿ ಅವರು ಒಮ್ಮೆ ಶಿವ ಮೊಗ್ಗೆಗೆ ಹೋದರು. ಅಲ್ಲಿ ಯಾರೋ ಮಿತ್ರರ ಮನೆಯಲ್ಲಿ 'ಮೊಡರ್ನ್ ರಿವ್ಯು' ಕಣ್ಣಿಗೆ ಬಿತ್ತು. ಅದರಲ್ಲಿ ಇದ್ದ ಅರ ವಿಂದರ ಬರಹದ ನಾಲ್ಕು ಸಾಲು ಅವರ ಗಮನ ಸೆಳೆಯಿತು. "ಅದನ್ನು ಓದಿ ನನಗೆ ವಿದ್ಯುತ್ ಸಂಚಾರವಾಯಿತು. ಯಾವುದನ್ನ ನನ್ನ ತರ್ಕ ಬುದ್ಧಿ ಸಮರ್ಪಕವಾಗಿದೆ ಎಂದು ತಿಳಿಯದೆ' ಹೃದಯದಲ್ಲಿ ಅನುಭವಿಸುತ್ತಾ ಬಂದಿದ್ದೆನೋ ಅದು ಏನೆಂದು ಆ ವಾಕ್ಯ ನನಗೆ ತಿಳಿಸಿತು. ಮೆದುಳಿಗೆ ಹೊಳೆಯದ ಯಾವುದೇ ಒಂದು ಅನುಭವ ಉಂಟಾಗಿತ್ತು."

ಅನಂತರವೇ ಅವರು ಅರವಿಂದರ ಕಡೆಗೆ ದೃಷ್ಟಿ ಹೊರಳಿ

ಮದು; ಅನಂತರವೇ ಅವರ ಕಾವ್ಯದಲ್ಲಿ ದರ್ಶನ ಎದ್ದು ಕಾಣುವಂತಾದುದ್ದು.

ಅದನ್ನು ಬರೆಯುವಾಗ ಅನೇಕ ಅಲೌಕಿಕ ಸಂಗತಿಗಳು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಅವರ ನೆರವಿಗೆ ಬಂದಿದ್ದವು. ರಾಮ-ರಾವಣರ ಯುದ್ಧ ವರ್ಣಿಸುವಾಗ ದ್ವಿತೀಯ ಮಹಾ ಯುದ್ಧ ಆರಂಭವಾಗಿತ್ತು. ಇಂದ್ರಜಿತುವಿನ ಯುದ್ಧದ ವರ್ಣನೆ ಯಲ್ಲಿ ಆಧುನಿಕ ವಿಜ್ಞಾನ ಸೃಷ್ಟಿಸಬಲ್ಲ ಶಸ್ತ್ರಾಗಾರವನ್ನೇ ಕಾಣಬಹುದು. ಪಂಚವಟಿಯ ಪರ್ಣಕುಟಿಯ ವರ್ಣನೆಯಲ್ಲಿ ಬರುವ ಮಂಜಿನ ವರ್ಣನೆ, ಮಲೆನಾಡಿನ ಅವರ ಅನುಭವ ದಿಂದ ಪ್ರೇರಿತವಾಯಿತು. ದಶಾನನ ಕನಸು—ನಿಜವಾಗಿಯೂ ಪುಟ್ಟಪ್ಪನವರಿಗೆ ಬಿದ್ದ ಕನಸು. ಒಮ್ಮೆ ಅವರು ಚಿಂತಾಮಗ್ನ ರಾಗಿರುವಾಗ ಅವರ ಚಿರಂಜೀವಿ ಅಳುತ್ತಿದ್ದ. ಆ ವೇಳೆಗೆ ಕಾವ್ಯ ಒಂದು ನಿಲುಗಡೆಗೆ ಬಂದು ಮುಂದುವರೆಯಲು ಕಷ್ಟ ವಾಗಿತ್ತು. ಅಳುತ್ತಿದ್ದ ಮಗನನ್ನು ಸಂತೈಸಲು 'ಏಕೆ ಅಳು ತ್ತೀಯೆ ?' ಎಂದು ಪ್ರಶ್ನಿಸಿದರು. ಅನಂತರ ಕಾವ್ಯ ಬರೆ ಯಲು ಕುಳಿತರು. ಸ್ಫೂರ್ತಿ ಸಹಜವಾಗಿ ಉಕ್ಕಿ 'ಏಕಳುವೇ ತೇಜಸ್ವಿ' ಇಂದಲೇ ಕಾವ್ಯ ಮತ್ತೆ ಭೋರ್ಗರೆದು ಹರಿಯಲು ಆರಂಭಿಸಿತು. ಅಂತೆಯೇ ಇನ್ನೊಮ್ಮೆ ಮನೆಯ ಮುಂದಿನ ಮರದಲ್ಲಿ ಹಕ್ಕಿಯೊಂದು 'ಟುವ್ವಿ ಟುವ್ವಿ' ಕರೆದುದೇ ಕಾರಣ ವಾಗಿ 'ಓ ಲಕ್ಷ್ಮಣಾ' ಸಂಚಿಕೆ ಆರಂಭವಾಯಿತೆಂದು ಅವರು ಬರೆದಿದ್ದಾರೆ.

ಈ ಕಾವ್ಯವನ್ನು ಕಾವ್ಯ ಭೂಮಿಕೆ, ಮನಃಶಾಸ್ತ್ರ

ಭೂಮಿಕೆ ತತ್ತ್ವದೃಷ್ಟಿ ಭೂಮಿಕೆ ಮತ್ತು ದರ್ಶನ ಧ್ವನಿ ಭೂಮಿಕೆಗಳಲ್ಲಿ ನಿಂತು ನೋಡಿದರೆ ಹೆಚ್ಚು ಅರ್ಥವಾಗುವು ದೆಂದು ಪುಟ್ಟಪ್ಪನವರ ಅಭಿಪ್ರಾಯ.

ಶ್ರೀ ರಾಮಾಯಣದರ್ಶನವು ಅಯೋಧ್ಯಾ ಸಂಪುಟ ಕಿಷ್ಕಿಂದ ಸಂಪುಟ, ಲಂಕಾ ಸಂಪುಟ, ಶ್ರೀ ಸಂಪುಟ ಎಂದು ನಾಲ್ಕು ಭಾಗವಾಗಿದೆ. ಇವುಗಳು ಕ್ರಮವಾಗಿ ಮನೋಮಯ, ಪ್ರಾಣಮಯ, ಅನ್ನಮಯ, ವಿಜ್ಞಾನಮಯ, ಮತ್ತು ಆನಂದ ಮಯಗಳ ಭೂಮಿಕೆಗಳನ್ನು ಪ್ರತಿಮಿಸುವುದೆಂದು ಪುಟ್ಟಪ್ಪ ನವರು ಹೇಳಿದ್ದಾರೆ. ಅಂತಲೇ ರಾಮಾಯಣ ಕಾವ್ಯವು—ಶ್ರೀ ರಾಮಾಯಣ ದರ್ಶನವಾಗಿದೆ. ಕಾವ್ಯವು ಆರಂಭದಲ್ಲಿ ಶ್ರೀಕಾರ ದಿಂದ ಆರಂಭವಾಗಿ ಮತ್ತೆ ಶ್ರೀಕಾರದಲ್ಲಿ ಅಂತ್ಯಗೊಳ್ಳುವುದು ಒಂದು ವಿಸ್ಮಯದ ಸಂಗತಿ. ಇದನ್ನು ತಾವು ಬರೆದುದಕ್ಕಿಂತ ತಮ್ಮನ್ನು ಅದು ಬರೆಸಿತೆಂಬ ಮಾತು ಪುಟ ಪುಟದಲ್ಲಿ ಎದ್ದು ಕಾಣುತ್ತದೆ. ಈ ಕಾವ್ಯವನ್ನು ಅರ್ಥ ಮಾಡಿಕೊಳ್ಳಲು ಸಿದ್ಧತೆ ಬೇಕು. ರಾಮಾಯಣ ದರ್ಶನವನ್ನು ಬಿಟ್ಟರೆ ಪುಟ್ಟಪ್ಪನವರ ಸಾಹಿತ್ಯ ಶೈಲಗಳಲ್ಲಿ, ಅಷ್ಟು ಎತ್ತರದಲ್ಲಿ ಅಲ್ಲದಿದ್ದರೂ ತನ್ನದೇ ಆದ ಎತ್ತರದಲ್ಲಿ, ಹಿರಿಮೆಯಲ್ಲಿ ನಿಲ್ಲುವ ಕೃತಿಗಳೆಂದರೆ ಚಿತ್ರಾಂ ಗದ ಕಾವ್ಯ ಮತ್ತು ಕಾನೂರು ಸುಬ್ಬಮ್ಮ ಹೆಗ್ಗಡತಿ. ಚಿತ್ರಾಂ ಗದಕ್ಕೆ ಲಕ್ಷ್ಮೀಶನ ಕಾವ್ಯದಿಂದಲೂ, ಠಾಕೂರರ 'ಚಿತ್ರಾ' ನಾಟಕದಿಂದಲೂ ವಸ್ತುವನ್ನು ತೆಗೆದುಕೊಂಡು ತಮ್ಮದೇ ಆದ ನೂತನ ಕಲ್ಪನೆಯಲ್ಲಿ ಅದನ್ನು ಬೆಸೆದು ಹೊಸದೊಂದು ಕಾವ್ಯ ಪಾಕ ಸಿದ್ಧಗೊಳಿಸಿದ್ದಾರೆ. ಇದು ಮುಂಬರಲಿರುವ

ಮಹಾಕಾವ್ಯಕ್ಕೆ ಮುನ್ಸೂಚನೆಯೆಂಬಂತೆ ಇದೆ. ಇಲ್ಲಿ ಬಳ ಸಿದ ಮಹೋಪಮೆಗಳು ಮುಂದೆ ರಾಮಾಯಣದರ್ಶನದಲ್ಲಿ ಸಮೃದ್ಧವಾಗಿ ಬಂದಿವೆ. ಇದು ಪುಟ್ಟಪ್ಪನವರ ಉತ್ತಮ ಕೃತಿಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ.

ಗದ್ಯ ಕೃತಿಗಳಲ್ಲಿ ಕಾನೂರು ಸುಬ್ಬಮ್ಮ ಹೆಗ್ಗಡತಿ ಪುಟ್ಟ ಪ್ಪನವರ ಒಂದು ಮಹತ್ಕೃತಿ. ಇದನ್ನು ಬರೆಯಲು ನಾಲ್ಕ ವರ್ಷ ಹಿಡಿಯಿತು. ಇದನ್ನು ಮಲೆನಾಡಿನ ಮಹಾಭಾರತ ವೆಂದು ವಿಮರ್ಶಕರು ಕರೆದಿದ್ದಾರೆ. ಅವರು ಮಲೆನಾಡಿನ ಜೀವನವನ್ನು ಪದರು ಪದರವಾಗಿ ಬಿಚ್ಚಿತೋರಿಸಿ, ಹೊಸ ದೊಂದು ಪ್ರಪಂಚಕ್ಕೆ ಓದುಗರನ್ನು ಕರೆದೊಯ್ಯುತ್ತಾರೆ. ಇದರ ಮೇಲೆ ಥಾಮಸ್ ಹಾರ್ಡಿಯ 'ರಿಟರ್ನ ಆಫ್ ದಿ ನೇಟೀವ್' ಕಾದಂಬರಿಯ ಪ್ರಭಾವ ಉಂಟೆಂದು ಕೆಲವರು ಹೇಳುತ್ತಾರೆ!

ನಾಟಕರಂಗದಲ್ಲೂ ಪುಟ್ಟಪ್ಪನವರು ತಮ್ಮ ಕೀರ್ತಿಸ್ತಂಭ ವನ್ನು ನಿಲ್ಲಿಸಿದ್ದಾರೆ. ರಕ್ತಾಕ್ಷಿ ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು ಸಲಹೆ ಮಾಡಿದ್ದ ಐತಿಹಾಸಿಕ ಕಥೆಯೊಂದರ ಆಧಾರದ ಮೇಲೆ ರಚಿಸಲಾಗಿದ್ದು, ಅದು ಕನ್ನಡಿಗರ ಹ್ಯಾಮ್ಲೆಟ್ ಎಂದು ಕರೆಸಿ ಕೊಂಡಿದೆ. ಅಂತೆಯೇ ಶೇಕ್ಸ್‌ಪಿಯರನ 'ಟೆಂಪೆಸ್ಟ' ನಾಟ ಕವು 'ಬಿರುಗಾಳಿ'ಯಾಗಿ ಸುಂದರವಾಗಿ ಕನ್ನಡಕ್ಕಿಳಿದಿದೆ. ಇವು ಗಳು ಬೇರೆಡೆಯಿಂದ ತಂದವುಗಳಾಗಿದ್ದರೂ ಸ್ವತಂತ್ರ ವಜ್ರ ಗಳಾಗಿ ಹೊಳೆಯುತ್ತಿವೆ.

ಪುಟ್ಟಪ್ಪನವರು ಕಾವ್ಯ ಬರೆದುದಕ್ಕೆಲ್ಲ ಹೊನ್ನಿನ ಕಳ

ವಿಟ್ಟಿದ್ದಾರೆ. ಕನ್ನಡ ಸಾಹಿತ್ಯ ಭಂಡಾರದ ಸಾರಸ್ವತ ಸಂಪತ್ತನ್ನು ಅವರು ತಮ್ಮ ಅದ್ವಿತೀಯ ಕಲಾಕೃತಿಗಳಿಂದ ಹೆಚ್ಚಿಸಿದ್ದಾರೆ. ಅವರು ಬರೆದಿರುವ ಕಿರು ನಾಟಕಗಳಾದ ಮಹಾರಾತ್ರಿ, ಸ್ಮಶಾನ ಕುರುಕ್ಷೇತ್ರ, ಜಲಗಾರಗಳು ತಮ್ಮದೇ ಆದ ಶೋಭೆಯಿಂದ ಮೆರೆಯುತ್ತಿವೆ. ಒಮ್ಮೆ ಕೈಲಾಸಂ ಸ್ಮಶಾನ ಕುರು-ಕ್ಷೇತ್ರ ನಾಟಕವನ್ನು ಕೇಳಿ ಅಂದರಂತೆ: "ನನಗೆ ಆ ಭಾಷೆ ಸಾಧ್ಯವಾಗಿದ್ದಿದ್ದರೆ . . . ಸಾಧ್ಯವಾಗಿದ್ದಿದ್ದರೆ . . ." ಈ ನಾಟಕಗಳನ್ನು ಕಂಡು ಕಣ್ಣೀರು ಸುರಿಸಿದವರು ಅನೇಕರಿದ್ದಾರೆ. ಮಹಾಕವಿ ಟಾಲ್ಸಟಾಯಿಯು ತನ್ನ 'ದಿ ಟು ಪಿಲಿಗ್ರಿಮ್ಸ್' ಕಥೆಯಲ್ಲಿ ಸಾರಿದ ದಿವ್ಯಸಂದೇಶವನ್ನೇ, ರವೀಂದ್ರರು ತಮ್ಮ Scavenger–ಜಲಗಾರ–ಪದ್ಯದಲ್ಲಿ ಕಾಣಿಸಿದ ತತ್ವವನ್ನೇ ಪುಟ್ಟಪ್ಪನವರು ಜಲಗಾರ ನಾಟಕದಲ್ಲಿ ಚೆನ್ನಾಗಿ ತೋರಿಸಿದ್ದಾರೆ. ಕರ್ಮವನ್ನೇ ನಿತ್ಯಯೋಗವೆಂದು ತಿಳಿದ ಜಲಗಾರನಿಗೆ ಶಿವನು ಜಲಗಾರನ ವೇಷದಲ್ಲಿ ಕಾಣಿಸಿಕೊಳ್ಳುವುದು ಅರ್ಥಗರ್ಭಿತವಾದ ಸುಂದರ ಕಲ್ಪನೆ.

ಅವರು ಬರೆದಿರುವ ಸ್ವಾಮಿ ವಿವೇಕಾನಂದ, ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆಗಳು ಉತ್ಕೃಷ್ಟ ಜೀವನ ಚರಿತ್ರೆಗಳಾಗಿ ಪರಿಗಣಿತವಾಗಿವೆ. ಅಂತೆಯೇ ಅವರ ಸನ್ಯಾಸಿ ಮತ್ತು ಇತರ ಕಥೆಗಳು, ನನ್ನ ದೇವರು ಮತ್ತು ಇತರ ಕಥೆಗಳು ಕನ್ನಡ ಸಾಹಿತ್ಯಕ್ಕೆ ಬೆಲೆಯುಳ್ಳ ಕಾಣಿಕೆಗಳಾಗಿವೆ. ಗುಪ್ತ ನಿಧಿಯನ್ನಾಗಲೀ, ಮೀನಾಕ್ಷಿ ಮನೆ ಮೇಷ್ಟ್ರನ್ನಾಗಲೀ, –ಕ್ರಿಸ್ತನಲ್ಲ ಪಾದ್ರಿಯ ಮಗಳನ್ನಾಗಲೀ ಯಾರು ಮರೆಯಬಲ್ಲರು? ಅವರ

ಮಲೆನಾಡಿನ ಚಿತ್ರಗಳಂತೂ ಅದ್ಭುತ ಸೃಷ್ಟಿ. ಅಜ್ಜನ ಅಭ್ಯಂಜನವನ್ನೂ, ಹುಲಿಯ ಬೇಟೆಯನ್ನೂ ಓದಿ ಸಂತೋಷ ಪಡದ ಕನ್ನಡಿಗರು ಯಾರು?

ಪುಟ್ಟಪ್ಪನವರು ಸ್ವಭಾವತಃ ಕವಿಗಳು. ಅವರನ್ನು ನೋಡುತ್ತಲೇ ಅವರು ಭಾವನಾಜೀವಿಗಳೆಂದು ಹೇಳಬಹುದು. ಅವರು ಕನ್ನಡಕ್ಕೆ ಕೊಟ್ಟಿರುವ ನೂರಾರು ಭಾವಗೀತೆಗಳಲ್ಲಿ ಬಹುಪಾಲಿನವು ಮೇಲ್ತರಗತಿಯ ಕವನಗಳಾಗಿವೆ. 'ಕಿಂದರಿ ಜೋಗಿ,' 'ಕುಮಾರವ್ಯಾಸನು ಹಾಡಿದನೆಂದರೆ' ಇವುಗಳನ್ನು ಕೇಳದ ಕನ್ನಡಿಗರಿಲ್ಲ! ಅಂತಲೇ ಅವರ ದೇಶಪ್ರೇಮದ, ಶೃಂಗಾರದ ಕವನಗಳನ್ನು ಓದಿ ಮೈಮರೆಯದವರು ಇಲ್ಲ! ಪುಟ್ಟಪ್ಪನವರ ಮೊದಲಿನ ಕೃತಿಗಳಲ್ಲಿ ಸರಳತೆ ಇದೆ, ಸುಭಗತೆ ಇದೆ. ಅವು ಪಂಡಿತ-ಪಾಮರ ರಂಜಕವಾಗಿದೆ. ಆದರೆ ಇತ್ತೀಚಿನ ಕವನಗಳಲ್ಲಿ, ಅವರ ಕೃತಿಗಳಲ್ಲಿ ಮೊದಲಿನ ಸರಳತೆ ಮಾಯವಾಗಿದೆ. ಹೆಚ್ಚು ಸಂಸ್ಕೃತ ಪದಗಳು, ಕ್ಲಿಷ್ಟವಾದ ಭಾಷೆ-ಭಾವನೆಗಳು, ಹೆಚ್ಚು ಹೆಚ್ಚಾಗಿ ಆಧ್ಯಾತ್ಮ ವಿಚಾರಗಳು ಸೇರಿದು ಹೋಗುತ್ತವೆ ಎಂದು ಅನೇಕರ ಆಕ್ಷೇಪ. ಇದಕ್ಕೆ ಉತ್ತರವಾಗಿ ಪುಟ್ಟಪ್ಪನವರು ಹೀಗೆ ಹೇಳಿದ್ದಾರೆ: "ಆಗ ನಾನು ಮಗುವಾಗಿದ್ದೆ. ಮುದ್ದುಮುದ್ದಾಗಿದ್ದೆ. ಈಗ ಬೆಳೆದು ದೊಡ್ಡವನಾಗಿದ್ದೇನೆ. ಬಲಿಷ್ಠತೆಯ ಜತೆಗೆ ಸ್ವಲ್ಪ ಒರಟೂ ಸೇರಿರುತ್ತದೆ." ಇನ್ನೊಮ್ಮೆ:

"ಚಿಕ್ಕವನಾಗಿದ್ದಾಗ ನನಗೆ ಮೀಸೆ ಇರಲಿಲ್ಲ. ಈಗ ಬೆಳೆದಿದ್ದೇನೆ. ಈಗ ಮೀಸೆ ಬಿಟ್ಟಿದ್ದೇನೆ. ಅದನ್ನೇಕೆ ಬೇಡವೆನ್ನು

ತ್ತೀರಿ? ಬೆಳೆಯುವುದು, ವಿಕಾಸವಾಗುವುದು ಸಹಜ ಗುಣ ಅಲ್ಲವೆ?" ಎಂದು ಪ್ರಶ್ನಿಸಿದವರನ್ನೇ ತಬ್ಬಿಬ್ಬು ಮಾಡಿದ್ದರು.

"ಮಗುವೊಮ್ಮೆ ಯಾರೋ ನೀವು ಹಿಮಾಲಯ-ನಿಮ್ಮ ಬಳಿ ಬರಲು ಅಂಜಿಕೆಯಾಗುತ್ತದೆ" ಎಂದು ಹೇಳಿದುದಕ್ಕೆ,

"ನಾನು ಹಿಮಾಲಯವೆನ್ನುವಿರಾ? ಹಿಮಾಲಯದ ಭವ್ಯತೆಯ ಬಳಿ ಅರಳಿದ ಕಿರಿಪೂವಿನ ರಮಣೀಯತೆಯು ಅದಕ್ಕಿಂತ ಯಾವ ರೀತಿಯಲ್ಲಿ ಕಡಿಮೆಯಾದೀತು" ಎಂದು ಅವರ ಅಧೀರತೆಯನ್ನು ಕಳೆದಿದ್ದಾರೆ.

ಒಮ್ಮೆ ಧಾರವಾಡದ ಮುರುಘಾಮಠದಲ್ಲಿ ಪುಟ್ಟಪ್ಪನವರ ಕಾವ್ಯ ವಚನವಿತ್ತು. ಅದನ್ನು ಕೇಳಿದ ಶ್ರೀ ಮೃತ್ಯುಂಜಯ ಸ್ವಾಮಿಗಳು ಅವರನ್ನು ತಬ್ಬಿಕೊಂಡು "ನಿಜವಾದ ಯೋಗಿ, ಶ್ರೇಷ್ಠ ಪುರುಷನು ಇಲ್ಲಿಹನು. ಆತ್ಮ ಸಾಕ್ಷಾತ್ಕಾರ ಮಾಡಿ-ಕೊಂಡ ಮಹಾನುಭಾವನು ಇಲ್ಲಿಹನು" ಎಂದು ಉದ್ಗರಿಸಿದ ರಂತೆ.

ಅದೇ ಸಮಯದಲ್ಲಿ ಅಲ್ಲಿ ಇದ್ದ ಕೋಕಿಲೆಯೊಂದು ಅಪರೂಪವಾಗಿ ಧ್ವನಿಗೈಯಲು "ಆ ಪ್ರಸಾದ ನಿಲಯದ ಮಹಾ ಶಿವಯೋಗಿ ವರೇಣ್ಯರು ಕೋಕಿಲೆಯಾಗಿ ನನ್ನನ್ನು ಹರಸು ತ್ತಿದ್ದಾರೆ" ಎಂದು ಪುಟ್ಟಪ್ಪನವರು ಭಾವ ಸಮಾಧಿಯಲ್ಲಿ ನುಡಿದರು. ಇದು ಪುಟ್ಟಪ್ಪನವರಿಗೆ ಮಾತ್ರ ಸಾಧ್ಯ.

ಒಮ್ಮೆ ಈಶ್ವರ ಸಣಕಲ್ಲರೊಂದಿಗೆ ಮಾತನಾಡುತ್ತಾ "ಸಣಕಲ್ಲ, ಎಷ್ಟೋ ಜನರು ನಾನು ಬಹಳ ಗಂಭೀರನೆಂದು

ಭಾವಿಸಿರುವರು. ಆದರೆ ನಾನು ಒಬ್ಬ ವಿನೋದಿ ಎಂದು ಅವ
ರಿಗೆಯಾರು ಹೇಳಬೇಕು!" ಎಂದು ಹೇಳಿದರಂತೆ. ಪುಟ್ಟಪ್ಪ
ನವರ ಮೇಲಿನ ಆರೋಪಣೆಗಳಲ್ಲಿ ಇನ್ನೊಂದು ಅವರು
ಜನರೊಡನೆ ಬೆರೆಯುವುದಿಲ್ಲವೆಂದು. ಒಮ್ಮೆ ಶ್ರೀ ಶಂ. ಬಾ.
ಜೋಷಿ ಹಾಗೆ ಆರೋಪಿಸಿದ್ದರು. ಆಗ ಪುಟ್ಟಪ್ಪನವರು :

"ಆದ್ಯತನದ ದೋಷಾರೊಪಣೆಗಿಂತ ಶಾಶ್ವತದ ಕಡೆಗ
ದೃಷ್ಟಿ ಇಡುವುದು ವಿಹಿತವಲ್ಲವೆ?" ಎಂದು ಮಿಂಚಿನಂತ
ಉತ್ತರ ಕೊಟ್ಟಿದ್ದರು.

ಆದರೂ ಪುಟ್ಟಪ್ಪನವರು ಮಿತಭಾಷಿಗಳು— ಮಾ
ಗಿಂತಲೂ ಮೌನವೇ ಅವರಿಗೆ ಪ್ರಿಯ. ಅವರು ಏಕಾಂ
ಪ್ರಿಯರು. ಆದರೆ ಒಮ್ಮೆ ಮಾತಿಗೆ ತೊಡಗಿದರೆ ಅವರ ಮಾತಿ
ಮರುಳಾಗದವರು ಯಾರು? ಅವರ ತಿಳಿಹಾಸ್ಯವನ್ನು ಸ್ವಾ
ತಿಸದವರು ಯಾರು?

"ಪುಟ್ಟಪ್ಪನವರು ಇಂಗ್ಲೀಷಿನಲ್ಲಿ ಮಾತನಾಡಿದರೆ ನಿಷ
ರದ ಸೀಮೆಗೆ ಹೋಗಿ ಬಿಡುತ್ತಾರೆ. ಆದರೆ ಕನ್ನಡದಲ್ಲಿ ಮಾ
ನಾಡಿದರೆ, ಕೇಳುವವರನ್ನು ಮರುಳು ಮಾಡಿ ನಿರಸ್ತ್ರರನ್ನಾ
ಮಾಡುತ್ತಾರೆ" ಎಂದು ಪ್ರೊ. ಡಿಸೋಜಾರವರು ಹೇಳು
ಮಾತು ನಿಜ. ಅವರ ಮಾತಿನಲ್ಲಿ ಅಂತಹ ಮೋಡಿ, ಸಮೋ
ಕತೆ ಇದೆ. ಅವರ ಮಾತುಕತೆ, ಭಾಷಣಗಳನ್ನು ಕೇಳಿದ
ರಾರೂ ಈ ಮಾತು ನಿಜವೆಂದು ಒಪ್ಪದೆ ಇರರು.

ಪುಟ್ಟಪ್ಪನವರ ವಿನೋದ ಪ್ರವೃತ್ತಿಯ ಅನೇಕ ಹಾಸ್

ಚಟಾಕಿಗಳನ್ನು ಅವರ ಮಿತ್ರರೂ, ಶಿಷ್ಯರೂ, ನಮಗೆ ಉಳಿಸಿ ಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವನ್ನು ನೋಡಬಹುದಾಗಿದೆ.

ವಿಶ್ವ ವಿದ್ಯಾಲಯದ ಕನ್ನಡದ ಕೆಲಸದ ಬಗ್ಗೆ ಮಾತ ನಾಡುತ್ತ ಒಮ್ಮೆ "ಈ ಕೆಲಸ ಪಂಚೆಯ ಅಂಚಿನಂತೆ, ಭದ್ರಕ್ಕೂ ಆಯಿತು, ಭೂಷಣಕ್ಕೂ ಆಯಿತು" ಎಂದರಂತೆ.

ಇನ್ನೊಮ್ಮೆ ಕನ್ನಡ ಆನರ್ಸ್ ತೆಗೆದುಕೊಳ್ಳಲು ಮಾರ್ಕ್ಸ್ ಕಡಮೆಯಾಗಿ ಹಿಂಜರಿದ ವಿದ್ಯಾರ್ಥಿಯ ಬಗ್ಗೆ ಹೇಳುತ್ತಾ-

"ಉತ್ಸಾಹದ ಮೂಲ ಧನದಿಂದ ವ್ಯಾಪಾರ ಪ್ರಾರಂಭಿಸ ಬಹುದಿತ್ತು" ಎಂದು ಹೇಳಿ ನಕ್ಕರಂತೆ.

ಅವರ ಪಾಠ ಪ್ರವಚನಗಳೆಂದರೆ ರಸ ಗಂಗೆಯಲ್ಲಿ ಮಿಂದು ಬಂದಂತೆ. ಒಂದು ತಾಸಿನಲ್ಲಿ ನೂರು ವಿಷಯಗಳ ಮೇಲೆ ವಿಚಾರಪೂರ್ಣವಾದ ಸಂಗತಿಗಳು ಮಿಂಚಿ ಹೋಗುತ್ತವೆ. ಅದರ ಸ್ವಾರಸ್ಯವನ್ನು- ಉ. ಕಾ. ಸುಬ್ಬರಾಯಾಚಾರ್ಯರು ತಮ್ಮದೊಂದು ಲೇಖನದಲ್ಲಿ ಉಳಿಸಿ ಕೊಟ್ಟಿದ್ದಾರೆ. ಅವರಂ ತಹ ಗುರುಗಳು ಎಲ್ಲರಿಗೂ ಸಿಕ್ಕುವುದಿಲ್ಲ- ಸಿಕ್ಕಿದವರ ಪುಣ್ಯ ನಿಜಕ್ಕೂ ದೊಡ್ಡದು! ಒಮ್ಮೆ ಅವರು ಪಾಠ ಹೇಳುತ್ತಾ-

"ವಿದ್ಯಾರ್ಥಿಗಳು ಭತ್ತದ ಗದ್ದೆಗಳಾಗಬೇಕೇ ಹೊರತು- ಬರಿಯ ಚೀಲಗಳಾಗಬಾರದು" ಎಂದು ಹೇಳಿದರಂತೆ ಈ ಮಾತು ಎಷ್ಟು ಅರ್ಥಗರ್ಭಿತವಾಗಿದೆ!

ಒಮ್ಮೆ ಗೆಳೆಯರೊಡನೆ ವಾಯು ಸಂಚಾರ ಹೋಗುತ್ತಾ ದಾರಿಯಲ್ಲಿ ತಮ್ಮ ಮೇಲೆ- ಹರಿದು ಬರುವಂತೆ ಬಂದ

ಬಸ್ಸನ್ನು ಕುರಿತು ಹೀಗೆಂದರು: "ಇತ್ತ ಬನ್ನಿ. ಪೆಟ್ರೋಲ್
ಎಂಬುದೂ ಒಂದು ಮಾದಕ, ಅದನ್ನು ಕುಡಿಯುವ ಬಸ್ಸ
ಲಾರಿಗಳಿಗೂ, ನಡೆಸುವವರಿಗೂ ಬುದ್ಧಿ ಸ್ಥಿಮಿತ ಇರುವುದೇ
ಇಲ್ಲ. ರೋಡು ಇರುವುದೆಲ್ಲ ನಮಗೇ ಎಂದು ತಿಳಿದ ಈ ನಾಗ
ರಿಕರಿಂದ ನಮ್ಮ ಮೂಳೆ ಮುಖ ಉಳಿಸಿಕೊಳ್ಳಲು ದಾರಿ ಬಿಟ್ಟು
ನಡೆಯುವುದೇ ಮೇಲು".

ಇನ್ನೊಮ್ಮೆ ಯಾರೋ ಶ್ರೀ ರಾಮಾಯಣ ದರ್ಶನದ
ಬೆಲೆ ಅತಿಯಾಯಿತೆಂದು ಆಕ್ಷೇಪಿಸಿದುದಕ್ಕೆ ಪುಟ್ಟಪ್ಪನವರು
ಮೌನವಾಗಿ ಅವರು ಕಾಲಿಗೆ ಹಾಕಿಕೊಂಡು ಬಂದಿದ್ದ ಹೊಸ
ಬೂಟ್ಸುಗಳ ಬೆಲೆ ಕೇಳಿದರು. "ಹದಿನಾರು ರೂಪಾಯಿ"
ಎಂದು ಅವರು ಹೇಳಿದರು. ಅದಕ್ಕೆ ಪುಟ್ಟಪ್ಪನವರು
"ಅಲ್ಲಾ ಕಾಣ್ರಿ ನನ್ನ ಪುಸ್ತಕ ಅದಕ್ಕಿಂತ ನಾಲ್ಕು ರೂಪಾಯಿ
ಕಡಮೆಯಲ್ಲರಿ" ಎಂದರು. ಆತ ಪೆಚ್ಚಾದ. ಅನಂತರ ಅವರು
ಹೇಳಿದರು. "ಅಯ್ಯ, ಈ ಬೂಟ್ಸುಗಳ (Immediate
ತತ್ಕ್ಷಣದ ಪ್ರತಿಫಲ ನಿಮಗೆ ಗೊತ್ತಿದೆ. ಭಾರವಾಗಿದ್ದರೂ
ಎಳೆದುಕೊಂಡಾದರೂ ಓಡಾಡುತ್ತಿದ್ದೀರಿ. ಆದರೆ ನನ್ನ
ಕಾವ್ಯದ ಉಪಯೋಗ ನಿಮಗೆ ಗೊತ್ತಿಲ್ಲ. ಅದು ತತ್ಕ್ಷಣ
ಕಾಣಿಸುವುದಿಲ್ಲ. ಅದನ್ನು ಅಭ್ಯಾಸಿಸಿ, ಉಪಯೋಗ ಪಡೆ
ಯುವ ವ್ಯವಧಾನ ನಿಮಗಿಲ್ಲ....ಹಿಂದಿನ ಕಾಲದಲ್ಲಿ ಆಗಿದ್ದ
ಬರೆಯುವಾತನಿಗೆ ಕನಿಷ್ಟ ನೂರು ಹೊನ್ನೋ, ವರಹ
ಳನ್ನೋ ಕೊಟ್ಟು ಅವನು ಬರೆದಷ್ಟು ದಿನ ಅನ್ನ ಬಟ್ಟೆ ಕೊಡು
ತ್ತಿದ್ದರು. ಆದರೆ ಒಂದು ಮಹಾಕಾವ್ಯ ೧೨ ರೂ. ಗೆ ದೊ

ಯುತ್ತದೆ ಎಂದರೆ ಈ ಜನಕ್ಕೆ ತುಟ್ಟಿಯಾಯಿತೆ?" ಎಂದು ಉದ್ಗಾರತೆಗೆದಾಗ ಆ ಗೆಳೆಯ ಅಲ್ಲಿರಲಿಲ್ಲ !

ಒಮ್ಮೆ ನವ್ಯಕವಿ ಶ್ರೀರಾಮಚಂದ್ರ ಶರ್ಮರೊಡನೆ ಮಾತನಾಡುತ್ತಾ, ಬಾನುಲಿಗೆ ತಿರುವಿದರು. ಆಗಷ್ಟೇ ಬಾನುಲಿಯಲ್ಲಿ ಅವರ ನವ್ಯಕಾವ್ಯದ ಬಗ್ಗೆ ವಿಮರ್ಶೆ ನಡೆದಿತ್ತು. ರೇಡಿಯೊಪಲ್ಲಿ ಅದು ಅಷ್ಟು ಸರಿಯಾಗಿ ಕೇಳಿಸಲಿಲ್ಲ. ಆಗ ಪುಟ್ಟಪ್ಪನವರೆಂದರು: "ನೋಡಿ, ನಿಮ್ಮ ನವ್ಯಕಾವ್ಯವೆಂದರೆ ರೇಡಿಯೋ ಕೂಡ ಅಸಹಕರಿಸುತ್ತದೆ!" ಇನ್ನೊಮ್ಮೆ ಗೆಳೆಯರೊಡನೆ ನವ್ಯಕಾವ್ಯದ ಬಗ್ಗೆ ಮಾತನಾಡುತ್ತಿರುವಾಗ ಪುಟ್ಟಪ್ಪನವರು ಎಂದರಂತೆ. "ನವ್ಯಸಾಹಿತಿಗಳು ನಾಳೆ ಬರೆಯುವ ನವ್ಯಕವಿತೆಯನ್ನು ನಾನು ನಿನ್ನೆಯೇ ಬರೆದಿದ್ದೇನೆ."

ಈ ಮಾತಿನಲ್ಲಿ ಜಂಭಕ್ಕಿಂತಲೂ, ವಿಚಾರ ವಿಮರ್ಶೆ ಇದೆ. ಇದು ನವ್ಯಕವಿತೆಯ ಬಗ್ಗೆ ಪುಟ್ಟಪ್ಪನವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ರೀತಿ !

ಪುಟ್ಟಪ್ಪನವರು ಒಮ್ಮೆ ತೀರ್ಥಹಳ್ಳಿಯಲ್ಲಿ ಯಮನ ಸೋಲು ನಾಟಕದಲ್ಲಿ ಪಾತ್ರವಹಿಸಿದ್ದರು. ಅವರು ಸತ್ಯವಾನನ ಪಾತ್ರವಹಿಸಿದ್ದರು. ನಾಟಕ ನೋಡಿ ಯಾರೋ ಹೇಳಿದರಂತೆ ಸತ್ಯವಾನನ ಬದಲು ಅವರು ಸಾವಿತ್ರಿಯಾಗಿ-ಹೋಗಿದ್ದರೆ ಒಳ್ಳೆತಾಗುತ್ತಿತ್ತೆಂದು.... ಇದನ್ನು ಕೇಳಿ ಪುಟ್ಟಪ್ಪನವರು ಗಹಗಹಿಸಿ ನಕ್ಕಿದ್ದರು. ಅವರ ಆದಿನ ರೂಪು

ಹಾಗಿತ್ತು. ಮಾತು ನಡೆನುಡಿ ಎಲ್ಲವೂ ಹೆಣ್ಣಿನ ಪಾತ್ರಕ್ಕೆ ಹೇಳಿ ಮಾಡಿಸಿದಂತೆ ಇತ್ತು.

ಪುಟ್ಟಪ್ಪನವರ ಕೈಲಾಸಂ ಅನುಭವವೂ ಸ್ವಾರಸ್ಯವಾಗಿದೆ: "ಕೈಲಾಸಂ ರಾಮಕೃಷ್ಣಾಶ್ರಮಕ್ಕೆ ಬಂದು ಸ್ವಾಮಿಗಳಿಗೆ ಅಡ್ಡಬಿದ್ದು ಆಮೇಲೆ ಸಿಗರೇಟು ಹೊತ್ತಿಸುತ್ತಿದ್ದರು. ಒಮ್ಮೆ ಅವರು ತಮ್ಮ Purpose ನಾಟಕವನ್ನು ತಡೆಬಡೆಯಿಲ್ಲದೆ ನುಡಿದು ತೋರಿಸಿದಾಗ ನಾನೂ ಅಲ್ಲಿದ್ದೆ. ನನಗೆ ಆಗ ರೋಮಾಂಚನವೆನಿಸಿತ್ತು. ಕೈಲಾಸಂ ಅವರಿಗೆ ಕನ್ನಡದ ಮೇಲೆ ಇಂಗ್ಲಿಷ ಭಾಷೆಯ ಮೇಲಿದ್ದ ಹಿಡಿತವಿದ್ದಿದ್ದರೆ ಅವರಿಂದ ಅಮೋಘವಾದ ಕೃತಿಗಳು ಬರುತ್ತಿದ್ದವು. ಗಂಭೀರ ವಿಷಯ ಪ್ರತಿಪಾದನೆಗೆ ಬೇಕಾದ ಪದ ಸಂಪತ್ತು ಅವರಿಗಿಲ್ಲ. ಅವರು ಅಂಥವೆಲ್ಲವನ್ನು ಇಂಗ್ಲಿಷಿನಲ್ಲಿ ಬರೆದರು!" ಎಂದು ಪುಟ್ಟಪ್ಪನವರು ಹೇಳಿದ್ದಾರೆ.

ಭಾರತದಲ್ಲಿ ಒಬ್ಬ ನಾಯಕನಿಗೆ ಗಂಟುಬೀಳುವ ಜನರ ಪ್ರವೃತಿಯ ಬಗ್ಗೆ ಅವರು ಒಮ್ಮೆ ಮಾತನಾಡುತ್ತ ಹೀಗೆಂದಿದ್ದಾರೆ "ಜನ ಒಬ್ಬ ನಾಯಕರನ್ನೇ ಅವಲಂಬಿಸಿಬಿಡುತ್ತಾರೆ. ಸ್ವತಂತ್ರವಾಗಿ ಯೋಚನೆಯನ್ನೇ ಮಾಡುವದಿಲ್ಲ. ಮಗ ಎಷ್ಟೇ ದೊಡ್ಡವನಾದರೂ ಅಮ್ಮನ ಸೀರೆಯ ಸೆರಗು, ಅಪ್ಪನ ಪಂಚೆಯ ಚುಂಗು ಹಿಡಿದುಕೊಂಡೇ ಹೋಗುತ್ತಾನೆ"

ಗಡಿಸಮಸ್ಯೆಗಳ ಬಗ್ಗೆ ಗೆಳೆಯರೊಂದಿಗೆ ಚರ್ಚಿಸುತ್ತ ಅವರು ಒಮ್ಮೆ ಹೀಗೆ ಹೇಳಿದರು.

"ಇದು ಅವನ ಜೇಬೇ ಇನ್ನೊಬ್ಬನದೇ ಎಂದು ನಿಶ್ಚಯವಾಗದಿರುವಾಗ ಅವನು ನನ್ನ ಜೇಬು ಎಂದು ಕೈ ಹಾಕಿದರೆ ಇನ್ನೊಬ್ಬನು 'ಏ ಇದು ನನ್ನ ಜೇಬು. ಅದರೊಳಗೆ ಕೈ-ಹಾಕುತ್ತೀಯಾ ?' ಎಂದು ಗದ್ದಲವೆಬ್ಬಿಸುತ್ತಾನೆ. ಯಾರ ಜೇಬು ಯಾವುದು ಎಂಬುದನ್ನು ನಿಶ್ಚಯಿಸಿಬಿಟ್ಟರೆ ಯಾವ ತಂಟೆಯೂ ಇಲ್ಲ. ತನ್ನ ತನ್ನ ಹಣ ತನ್ನ ತನ್ನ ಜೇಬಿನ-ಲ್ಲಿಯೇ ಸುರಕ್ಷಿತವಾಗಿ ಇಟ್ಟು ಸದುಪಯೋಗ ಮಾಡಿಕೊ-ಳ್ಳಲು ಅವಕಾಶವಿರುತ್ತದೆ.... ತನ್ನ ಜೇಬನ್ನು ಸಂಪದ್ಯುಕ್ತ ಮಾಡಿಕೊಳ್ಳಲುಪ್ರಯತ್ನಿಸುತ್ತಾನೆ." ಅವರು ಯಾವುದನ್ನೇ ಹೇಳಿದರೂ ಸುಂದರವಾಗಿ ಹೇಳುತ್ತಾರೆ, ಮನಮುಟ್ಟು-ವಂತೆ ಹೇಳುತ್ತಾರೆ. ಇದು ಪುಟ್ಟಪ್ಪನವರವೈಶಿಷ್ಟ್ಯ.

ಪುಟ್ಟಪ್ಪನವರು ಕುಪ್ಪಳ್ಳಿಯ ವೆಂಕಟಪ್ಪನವರ ಪುತ್ರರಾಗಿ, ಕಿಶೋರಚಂದ್ರ ವಾಣಿಯಾಗಿ, ಕೆ. ವಿ. ಪುಟ್ಟಪ್ಪನವರಾಗಿ, ಕುವೆಂಪುರವರಾಗಿ ಮಾರ್ಪಟ್ಟ ಕಥೆ ಕನ್ನಡ ಸಾಹಿತ್ಯದಕಳೆದ ಮೂರು ದಶಕಗಳ ಕಥೆಯಾಗಿದೆ ಎಂದರೆ ಅತಿಶಯೋಕ್ತಿಯಲ್ಲ! ಅವರು ತಮ್ಮ ೩೦ ವರ್ಷಗಳ ದೀರ್ಘ ಸಾಹಿತ್ಯ ಜೀವನದಲ್ಲಿ ಎರಡು ಮೂರು ಜನ್ಮಗಳಲ್ಲಿ ಮಾಡುವುದನ್ನು ಈ ಒಂದೇ ಜೀವನದಲ್ಲಿ ಸಾಧಿಸಿದ್ದಾರೆ. ಈ ಶತಮಾನದ ಮಹಾಕೃತಿಯನ್ನು ಕನ್ನಡ ಜನತೆಗೆ ಕೊಟ್ಟಿದ್ದಾರೆ. ಇದಕ್ಕಾಗಿ ಕನ್ನಡಿಗರು ಅವರಿಗೆ ಕೃತಜ್ಞರಾಗಿರಬೇಕಾಗಿದೆ. 'ಜಗದ್ಭವ್ಯ ಮೇರು ಕೃತಿ ಶ್ರೀ ರಾಮಾಯಣ ದರ್ಶನವನ್ನು ಓದಿ ಅರ್ಥಮಾಡಿಕೊಳ್ಳಲು ಅದಕ್ಕೆ ಭದ್ರ

ಚೇತನಬೇಕು !' ಎಂಬ ಮಾತು ಸುಳ್ಳಲ್ಲ. ಭಾಷೆಯ
ತೊಡಕು, ಭಾವಗಳ, ಬರವಣಿಗೆಯ, ಶೈಲಿಯ ನಾವೀನ್ಯತೆ
ಆಲೋಚನೆಗಳ ಗಹನತೆಗಳು ಅದನ್ನು ಅರ್ಥಮಾಡಿಕೊ
ಳ್ಳಲು ತೊಡಕುಂಟು ಮಾಡುತ್ತದೆ. ಆದರೂ ದುರ್ಗಮವಾದ
ಏಳು ಬೆಟ್ಟಗಳನ್ನೇರಿ ಬರದೇ ಶ್ರೀನಿವಾಸನ ದರ್ಶನವಾಗು
ವುದು ಹೇಗೆ ? ಈ ಭವ್ಯಕೃತಿಯನ್ನು ಅರಿತುಕೊಳ್ಳುವುದು
ಪ್ರಯತ್ನಶೂನ್ಯನಿಂದ ಸಾಧ್ಯವಿಲ್ಲ. ಇದರ ಯೋಗ್ಯತೆ
ಯನ್ನು ಅಳೆಯಲು ಯುಗಯುಗಳೇ ಬೇಕಾಗಬಹುದು
ಎಂಬ ಕೆಲವರ ಮಾತು ಅತಿಶಯೋಕ್ತಿಯಾದರೂ ಆ
ಮಾತಿನಲ್ಲಿ ಕೆಲವಂಶ ಸತ್ಯವಿಲ್ಲದೆ ಇಲ್ಲ.

ಪುಟ್ಟಪ್ಪನವರು ಇದೀಗ ಯೌವನ-ವೃದ್ಧಾಪ್ಯಗಳ ಸಂಧಿ
ಕಾಲದಲ್ಲಿ ಇದ್ದಾರೆ. ಅವರು ಯಾವುದನ್ನು ಬಯಸದಿದ್ದರೂ
ಅದೃಷ್ಟವಂತನಿಗೆ ಮಾತ್ರ ದೊರೆಯಬಹುದಾದ ಪದವಿ
ಅಧಿಕಾರ, ಸಂಪತ್ತು, ಕೀರ್ತಿಗಳು ಅವರದಾಗಿವೆ. " ಲೌಕಿ
ಪದವಿಗಳಿಗೆ ನಾನೆಂದೂ ಆಶಿಸಲಿಲ್ಲ. ಅಧ್ಯಾತ್ಮಿಕ ಪ್ರಪಂ
ದಲ್ಲಿ ನಾನೇರಬೇಕಾದ ಗಿರಿಗಳು, ಗೌರೀಶಂಕರಗಳು ಅನೇ
ವಿವೆ" ಎಂದು ಒಮ್ಮೆ ಹೇಳಿದ್ದಾರೆ. ಪ್ರಸಿದ್ಧಿ ಕೆಲವ
ಮೇಲೆ ಹೇರಲ್ಪಡುವುದಂತೆ, ಕೆಲವರು ಪ್ರಸಿದ್ಧ ಪುರುಷರಾ
ಗಿಯೇ ಹುಟ್ಟುತ್ತಾರಂತೆ. ಇನ್ನು ಕೆಲವರು ಪ್ರಸಿದ್ಧರಾಗಲ
ಹೋರಾಡುತ್ತಾರೆ. ಪುಟ್ಟಪ್ಪನವರ ಬಗ್ಗೆ ಮೊದಲೆರ
ಮಾತು ಸತ್ಯ. ಅವರು ಹುಟ್ಟುತ್ತಲೇ ಶ್ರೀಮಂತರಾಗಿ ಹುಟ್ಟಿ
ದರು. ಅದರೊಡನೆ ಹೃದಯ ಶ್ರೀಮಂತಿಕೆಯನ್ನು ಜೊ

ಕೊಂಡರು. ಅವರ ರಸಿಕತೆಗೆ, ಕಾವ್ಯಮಯ ಜೀವನಕ್ಕೆ ಅವರು ಬೆಳೆದ ಆವರಣ, ಪಡೆದ ಶಿಕ್ಷಣ, ಅವರ ಹಿಂದಣ ಸಂಸ್ಕಾರಗಳು ಕಾರಣವಾಗಿವೆ. ಅವರದು ತುಂಬು ಜೀವನ; ಜೀವನದಲ್ಲಿ ತುಂಬುದೃಷ್ಟಿ ಅವರು ಏನು ಮಾಡಿದರೂ ಅವರಲ್ಲಿ ನಾವೀನ್ಯ ಇರುತ್ತದೆ. ರಸಿಕತೆ ಎದ್ದು ಕಾಣುತ್ತದೆ.

ಅವರು ರೇಡಿಯೋ ಕೇಳಿದರೂ ಅದರಲ್ಲೂ ನಾವೀನ್ಯ ಇದ್ದುದನ್ನು ಅವರ ಶಿಷ್ಯರಾದ ಊ. ಕಾ. ಸುಬ್ಬರಾಯಾಚಾರ್ಯರು ಹೀಗೆ ವರ್ಣಿಸಿದ್ದಾರೆ: "ಒಂದು ದಿನ ರಾತ್ರಿ ಎಂಟು ಗಂಟೆ ಸಮಯಕ್ಕೆ ಗುರುಗಳ ಮನೆಗೆ ಹೋಗಿದ್ದೆ. ಬೆಳದಿಂಗಳು ಹಾಲುಚೆಲ್ಲಿತ್ತು. ಮನೆಯ ವಿದ್ಯುದ್ದೀಪಗಳು ಆರಿಸಲ್ಪಟ್ಟಿದ್ದುವು. ಆದರೆ ಮನೆಯ ಬಾಗಿಲು ತೆರೆದಿತ್ತು. ಇದೇನಿದು ಎಂದು ಸುತ್ತಲೂ ನೋಡಿದೆ. ಬಾನುಲಿಯ ವೀಣಾ ಧ್ವನಿ ಮನೆಯ ಒಳಗಿನ ರೇಡಿಯೋ ಮೂಲಕ ಮಂದ ಮಂದವಾಗಿ ತೋಟವನ್ನು ತುಂಬುತ್ತಿತ್ತು. ವೀಣಾ ಧ್ವನಿಯನ್ನು ಆಲಿಸುತ್ತ ಕವಿವರ್ಯರು ತೋಟದ ಮರದ ನೆರಳಿನಲ್ಲಿ ಕುರ್ಚಿಯ ಮೇಲೆ ಕುಳಿತಿದ್ದರು. ನನಗೂ ಒಂದು ಕುರ್ಚಿ ತರಹೇಳಿ ಕುಳಿತುಕೊಳ್ಳುವಂತೆ ಸನ್ನೆಮಾಡಿದರು. ನಾನು ಕುಳಿತೆ. ಶಾಂತವಾಗಿ ಸಂಗೀತದ ನಾದಮಯ ಲೋಕದಲ್ಲಿ ನನ್ನ ಚೇತನ ಸುಳಿಯತೊಡಗಿತು. ಗುರುಗಳು ಮೌನವಾಗಿಯೇ ಇದ್ದರು. . . . . ಅವರ ನಿರ್ಮಲ ರಸ ರೀತಿಗೂ ಇತರರಿಗೂ ಎಷ್ಟುವ್ಯತ್ಯಾಸವೆಂದುಕೊಂಡೆ. ವೈಜ್ಞಾನಿಕ ವಸ್ತುಗಳನ್ನು ದೈವೀರೀತಿಯಲ್ಲಿ ಉಪಯೋಗಿಸಿದರೆ

ಜೀವನ ಎಷ್ಟು ಪ್ರಶಾಂತಮಯ, ಆನಂದಮಯವೆಂದು ಯೋಚಿಸಿದೆ. ಅಂದು ಶ್ರೀಕುವೆಂಪು ನನಗಿತ್ತ ಉಪದೇಶ ಆ ಮೌನಗೀತ !"

ಪುಟ್ಟಪ್ಪನವರಿಗೆ ಹೂಗಳೆಂದರೆ ಪ್ರಾಣ. ಮಕ್ಕಳೆಂದರೆ ಪಂಚಪ್ರಾಣ ! ನಗರದಲ್ಲಿ ಇದ್ದುಕೊಂಡು ಅವರು ಒಂಟಿ ಕೊಪ್ಪಲಿನ ತಮ್ಮ ಮನೆ ಉದಯರವಿಯಲ್ಲಿ ತಮಗೆ ಬೇಕಾದ ಆವರಣ ಕಲ್ಪಿಸಿಕೊಂಡಿದ್ದಾರೆ. ಅವರು ತಮಗೆ ಬೇಕಾದ ನೂರಾರು ಬಗೆಯ ಗಿಡಗಳನ್ನು ತಮ್ಮ ತೋಟದಲ್ಲಿ ನಟ್ಟು ಬೆಳೆಸಿದ್ದಾರೆ. ಅವುಗಳು ಹೂಬಿಟ್ಟರೆ, ಮಕ್ಕಳ ನಗುಮುಖ ವನ್ನು ಕಂಡಷ್ಟು ಹರ್ಷಿಸುತ್ತಾರೆ. ಸಾಮಾನ್ಯ ವಸ್ತುವಿನಲ್ಲಿ ಪರಮನನ್ನು ಕಾಣುವ ಕಾವ್ಯಯೋಗ ಅವರಿಗೆ ಸಾಧಿಸಿದೆ; ಸಿದ್ಧಿಸಿದೆ.

ಅವರು ಲೌಕಿಕ ಸಂಪತ್ತಿನಿಂದ ಹೃದಯ ಸಂಪತ್ತಿನಿಂದ ಶ್ರೀಮಂತ ಕವಿ. ಕಾರಿಟ್ಟ ಕನ್ನಡ ಕವಿಗಳಲ್ಲಿ ಮಾಸ್ತಿಯವ ರನ್ನು ಬಿಟ್ಟರೆ ಇವರೇ ಮೊದಲಿಗರು. ಇವರಿಗೆ ಕಾರು ಇರುವು ದಾದರೂ ಬೇಸರವಾದಾಗ ಚಾಮುಂಡಿ, ಲಲಿತಾದ್ರಿ, ಶ್ರೀರಂಗ ಪಟ್ಟಣಗಳ ನಿಸರ್ಗ ರಮಣೀಯತೆಯನ್ನು ಪ್ರಶಾಂತಮೌನ ವನ್ನು ಸವಿದು ಆನಂದಿಸಲು ಕಾರು ಅವರ ಪಾಲಿಗೆ ಶಕ್ತಿಯ ಅವತಾರವಾಗಿದೆ. ಅದರ ಮೇಲೆ ಪುಟ್ಟಪ್ಪನವರು ಒಂದು ಕವನವನ್ನೂ ರಚಿಸಿದ್ದಾರೆ!

ಪುಟ್ಟಪ್ಪನವರಿಗೆ ಸಿಟ್ಟು ಬರುವುದು ಅಪರೂಪ–ಬಂದರೆ ಪರುಶರಾಮನ ಸಿಟ್ಟೇ ಬರುತ್ತದೆ. ಕನ್ನಡ ಮಾಧ್ಯಮ

ಕರ್ನಾಟಕ ಪ್ರಾಂತ್ಯನಿರ್ಮಾಣಗಳ ಬಗ್ಗೆ ಅವರು ಖಡಾ ಖಂಡಿತವಾಗಿ ಆವೇಶಪೂರ್ಣವಾಗಿ ಮಾತನಾಡುತ್ತಾರೆ. ಕನ್ನಡಿಗರ ಆಲಸ್ಯ, ಅಜ್ಞಾನ, ಮಿತಿಮೀರಿದ ಔದಾರ್ಯ, ಅಭಿಮಾನ ಶೂನ್ಯತೆಗಳನ್ನು ಕಂಡು ಕಲಿಯಂತೆ ಕೆರಳುತ್ತಾರೆ. ಅಂತೆಯೇ ತಮ್ಮ ಕಾವ್ಯವನ್ನು ಓದಿ ಸವಿಯಲು ಅಸಮರ್ಥನಾದ ಕುರುಡು ವಿಮರ್ಶಕನನ್ನು ಕಂಡರೆ ಅವರಿಗೆ ಆಗುವುದಿಲ್ಲ. ಕಾವ್ಯಕ್ಕೆ ಕವಿ ಹಾಗೂ ಸಹೃದಯರು ಎರಡು ಕಣ್ಣುಗಳಿದ್ದಂತೆ. ಕಾವ್ಯ ಸವಿಯಲು ಸಹೃದಯತೆ ಇಲ್ಲದೆ ಸಾಧ್ಯವಿಲ್ಲ. ಅದಿಲ್ಲದೆ ಪುಟ್ಟಪ್ಪನವರ ಕಾವ್ಯವನ್ನು ವಿಮರ್ಶಿಸಲು ಹೊರಟ ವಿಮರ್ಶಕರಿಗೆ ಅವರು ಕೊಟ್ಟಿರುವ ಸವಾಲು ಇದು.

**“ ನೀನೇರಬಲ್ಲೆಯಾ   ನಾನೇರುವೆತ್ತರಕೆ ?**
**ನೀ ಹಾರಬಲ್ಲೆಯಾ      ನಾ ಹಾರುವಗಲಕ್ಕೆ ?**
**ನೀ ಮುಳುಗಬಲ್ಲೆಯಾ    ನಾ ಮುಳುಗುವಾಳಕ್ಕೆ**
**ಇಲ್ಲ ?  ನಡೆ ದೂರ ಸರಿ ! ”**

ಎಂದು ವಿಮರ್ಶಕನಿಗೆ ಬೆದರಿಕೆಯನ್ನೇ ಹಾಕಿದ್ದಾರೆ.

ಇಂದು ಪುಟ್ಟಪ್ಪನವರ ಕೃತಿಗಳ ವಿಸ್ತಾರ-ವ್ಯಾಪ್ತಿಗಳನ್ನು ಕಂಡು ಯಾರಾದರೂ ವಿಸ್ಮಯಗೊಳ್ಳದಿರರು. ಆದರೆ “ ಪುಟ್ಟಪ್ಪನವರ ಹೃದಯದಲ್ಲಿ ಅಲ್ಲೋಲಕಲ್ಲೋಲವಾದ ಭಾವಸಮುದ್ರವು ನಿರಂತರವೂ ಉಕ್ಕೇರುತ್ತಿದೆ. ಈಗ ಹೊರಗೆ ಬಂದಿರುವುದು ಒಂದೇ ಸೀರ್ಪನಿ ! ” ಎಂದು ಶ್ರೀ ಗೋಕಾಕರು ಒಂದೆಡೆ ಹೇಳಿದ್ದಾರೆ. ಅವರು ಇನ್ನು ಮೇಲೆ ಬರೆಯಲು ಆಶಿಸಿರುವ ಕೃತಿಗಳ ಹಾಗೂ ಬರೆಯಲು

ಹಾಕಿಕೊಂಡಿರುವ ಕಾವ್ಯಗಳನ್ನು ನೋಡಿದರೆ. ಕೇಳಿದರೆ ಈ ಮಾತು ನಿಜವೆನಿಸುತ್ತದೆ. ಈಗ ಬಂದಿರುವ ನೂರ್ಮಡಿ ಸಾಹಿತ್ಯ ಕೃತಿಗಳು ಪುಟ್ಟಪ್ಪನವರ ಹೃದಯದಲ್ಲಿ ಮೂಡಿ ಮಾಯವಾಗುತ್ತಿವೆ. ಅವರ ಕಲ್ಪನಾವಿಲಾಸದಿಂದ ವಾಸ್ತವಿಕ ಜಗತ್ತಿಗೆ ಇಳಿದು ಬಂದಿರುವ ಅಣಿಮುತ್ತುಗಳು ನೂರರಲ್ಲಿ ಒಂದಂಶ ಮಾತ್ರ. ಅದು ಬತ್ತಲಾರದ ಬುಗ್ಗೆ; ಮುಗಿಯಲಾರದ ವಜ್ರದ ಗಣಿ. ಅನುಭವದ ವಿಶಾಲ ವಾರಿಧಿಯಿಂದ ಅವರು ಅಣಿಮುತ್ತುಗಳನ್ನು ಆಯ್ದು ಕನ್ನಡಾಂಬೆಯ ಸಿರಿಮುಡಿಯನ್ನು ಅಲಂಕರಿಸುತ್ತಿದ್ದಾರೆ. ಅವರು ಈಗ ನಮಗೆ ಕೊಟ್ಟಿರುವ ಕೃತಿಗಳು ಸಾಗರದಲ್ಲಿ ಮರೆಯಾಗಿ ಕೇವಲ ಶಿಖರ ಕಾಣುತ್ತಿರುವ ಮಂಜು ಮಲೆಗಳಂತೆ. ಅವರ ಹೃದಯ ಸಮುದ್ರದ ಗರ್ಭದಲ್ಲಿ ಇದಕ್ಕೂ ನೂರ್ಮಡಿ ವಿಸ್ತಾರ, ಆಳವಿದೆ!

ಅವರು ಕೆಲವು ವರ್ಷಗಳ ಹಿಂದೆ 'ಮಲೆನಾಡಿನ ಮದುಮಗಳು' ಎಂಬ ಹನ್ನೆರಡು ನೂರು ಪುಟಗಳ ಕಾದಂಬರಿಯ ರಚನೆಗೆ ಕೈ ಹಾಕಿ, ಕೆಲವು ಪ್ರಕರಣಗಳನ್ನು ಮುಗಿಸಿ ಕೈ ಬಿಟ್ಟಿದ್ದಾರೆ. ಮೂರು ಸಾವಿರಕ್ಕೆ ಮಿಕ್ಕಿ ಹರಿಯುವ ಬೃಹತ್ ಕಾದಂಬರಿಯೊಂದರ ಹೊಳವು ಅವರ ಚಿತ್ತದಲ್ಲಿ ಆಗೊಮ್ಮೆ ಈಗೊಮ್ಮೆ ಹೊಳೆದು ಮಾಯವಾಗುತ್ತಿದೆಯಂತೆ. ಇವಲ್ಲದೆ ಅರವಿಂದರ ಮೇಲೆ ಒಂದು ದಾರ್ಶನಿಕ ಗ್ರಂಥ-ಜೀವನ ಚರಿತ್ರೆ ಬರೆಯುವ ಆಸೆ ಅವರಿಗೆ ಇದೆ. ಅಂತೆಯೇ ರಶಿಯದ ರಸಋಷಿ ಟಾಲ್‌ಸ್ಟಾಯರ ಜೀವನವನ್ನು ಕುರಿತು ಬರೆಯುವ

ಉತ್ಕಟಾಕಾಂಕ್ಷೆ ಅವರಿಗೆ ಇದೆ. ಅಲ್ಲಮ, ಗೋರಕ್ಷನಾಥ ರನ್ನು ಕುರಿತು ಬೆರಳ್ಗೆ ಕೊರಲ್ ನಾಟಕದಂತೆ ಒಂದು ನಾಟಕ ಬರೆಯುವ ಆಸೆ ಇದೆ. ಅಂತೆಯೇ ಗಾಂಧಿಜಿಯವರನ್ನು ಕುರಿತು 'ಗಾಂಧಿ ದರ್ಶನ' ಬರೆಯುವ ಇಚ್ಛೆ ಇದೆ. ಇವು ಎಲ್ಲಕ್ಕಿಂತಲೂ ಮೇರುಕೃತಿಯಾದ 'ಆದಿ ಕವಿ ಸಂಭೂತಿ' ಎಂಬ ದಾರ್ಶನಿಕ ಗ್ರಂಥವನ್ನು ಗದ್ಯಪದ್ಯ ನಾಟಕ ರೂಪ ದಲ್ಲಿ, ಯಾವುದೇ ಒಂದು ಕಥಾನಕವಿಲ್ಲದೆ ಬರೆಯಬೇಕೆಂಬ ಮಹದಾಸೆ ಇದೆ. 'ಇವುಗಳನ್ನು ಆಯುಷ್ಯವು ಮುಗಿಯು ವುದರೊಳಗೆ ಬರೆದುಮುಗಿಸಲು ಆ ಭಗವಂತನು ಅನುಗ್ರಹಿಸ ಬೇಕು' ಎಂದು ಅವರು ಒಮ್ಮೆ ಉದ್ಗಾರ ತೆಗೆದಿದ್ದಾರೆ.

ಮತ್ತೊಮ್ಮೆ ತಾವು ರಚಿಸಬೇಕೆಂದಿರುವ ಹಿಮಗಿರಿಗಳ ಔನ್ನತ್ಯವನ್ನು ನೆನೆದು ನಮ್ರರಾಗಿ ಹೀಗೇ ಹೇಳುವುದೂ ಉಂಟು.

"ಇವುಗಳು ರೂಪ ತಾಳುವುವೋ ಇಲ್ಲವೋ! Who knows I may become a great Poet of an unwritten Epic."

ಪುಟ್ಟಪ್ಪನವರಲ್ಲಿ ದೈತ್ಯಶಕ್ತಿ ಇದೆ; ಅಂತೆಯೇ ನಿರ್ಮಲ ಅಂತಃಕರಣ ಎದುರಾದಾಗ, ನಿರ್ವ್ಯಾಜ ಸ್ನೇಹ ದೊರೆತಾಗ ಅವರು ಹಸುಗೂಸಿನಂತೆ ಸಂತೋಷಪಡುತ್ತಾರೆ. ವ್ಯವಹಾರ ದಲ್ಲಿ ಮಗುವಿನಂತೆ ಮುಗ್ಧರಾಗಿರುವ ಅವರನ್ನು ಸುಲಭವಾಗಿ ಮೋಸಪಡಿಸಬಹುದು! ಅವರು ಎಲ್ಲವನ್ನೂ ಎಲ್ಲರನ್ನೂ ಒಳ್ಳೆಯವರೆಂದೇ ನೋಡುತ್ತಾರೆ. ಅವರ ಕೆಟ್ಟತನ ತಮಗೆ

ಅನುಭವವಾಗುವ ತನಕ ಇದೇ ಭಾವ ಅವರಲ್ಲಿ ಇರುತ್ತದೆ. ಅವರು ರಾಮಾಯಣ ದರ್ಶನದ ಬಗ್ಗೆ ತಳೆದಿರುವ ಅಭಿಮಾನವನ್ನು ಕಂಡು ಕೆಲವು ವಿಮರ್ಶಕರು ಅಹಂಕಾರವೆಂದು ಟೀಕಿಸಿರುವುದೂ ಉಂಟು. ಆದರೆ ಅದು ಸಾತ್ವಿಕ ಅಹಂಕಾರ. ಅದರಲ್ಲಿ ವೈಯಕ್ತಿಕ ಅಹಂಕಾರದ ಅಂಶ ತೀರ ಕಡಿಮೆ. ಹಿಂದಿನ ಎಲ್ಲ ಕವಿ ದಾರ್ಶನಿಕರ ಕೃತಿಗಳನ್ನು ಅರಗಿಸಿಕೊಂಡು 'ಅಜ್ಜನ ಹೆಗಲೇರಿದ ಮೊಮ್ಮಗನಂತೆ' ಅವರಿಗಿಂತಲೂ ಎತ್ತರಕ್ಕೆ ತಾವೇರಿದ್ದೇವೆ ಎಂದಷ್ಟೇ ಅವರ ಅಭಿಪ್ರಾಯ!

ಪುಟ್ಟಪ್ಪನವರ ಯಶಸ್ಸಿನ ಆಶ್ಚರ್ಯಕರ ಅಂಶವೆಂದರೆ ತಮ್ಮ ದಂತಗೋಪುರದಲ್ಲಿ ಜನಸಂಪರ್ಕವಿಲ್ಲದೆ ಬಾಳಿಯೂ ಈ ಪ್ರಚಾರಯುಗದಲ್ಲಿ ಅದ್ವಿತೀಯ ಪ್ರಸಿದ್ಧಿಯನ್ನು ಹೊಂದಿದುದು. ಅವರ ಪೂರ್ವಪುಣ್ಯದ ಸತ್ವದಿಂದ ಅವರ ಬಾಳು ಊರ್ಧ್ವಮುಖವಾಗಿ ಸಾಗಿದೆ. ಅವರು ಶ್ರೀಮಂತ ಕುಲದಲ್ಲೇ ಹುಟ್ಟಿ ಆರ್ಥಿಕ ಸಮೃದ್ಧಿಯಲ್ಲೇ ಬಾಳಿ ಪ್ರಚಾರವಿಲ್ಲದೇ ಕವಿತ್ವಕ್ಕೆ ಜೀವಂತಕಾಲದಲ್ಲಿ ವಿರಳವಾಗಿಯೇ ದೊರೆಯುವ ಕೀರ್ತಿಯನ್ನು ಪಡೆದಿದ್ದಾರೆ. ಅವರಿಗೆ ಮೈಸೂರು ವಿಶ್ವವಿದ್ಯಾಲಯ ಡಾಕ್ಟರೇಟ ಬಿರುದನ್ನಿತ್ತಿದೆ. ಅವರ ಲೌಕಿಕ ಉತ್ಕರ್ಷವೂ ಚಿಕ್ಕದಲ್ಲ, ಶಿಕ್ಷಣಶಾಖೆಯಲ್ಲಿ ಯಾವಾತನೂ ನಿರೀಕ್ಷಿಸಬಹುದಾದ ಅತ್ಯುನ್ನತ ಸ್ಥಾನವಾದ—ವಿಶ್ವವಿದ್ಯಾಲಯದ ಉಪಕುಲಪತಿ ಪದವಿಯನ್ನು ಅವರು ಪಡೆದಿದ್ದಾರೆ. . . .

ಶಂ

೧೪-೧೦-೬೦

## ಗ್ರಂಥಋಣ

ಸಾಹಿತ್ಯಾಂಕ. ಶ್ರೀ ಕುವೆಂಪು ಸಂದರ್ಶನ. ಉಡುಗೊರೆ. ಕವಿದರ್ಶನ. ರಾಮಾಯಣ ದರ್ಶನದ ಮೇಲಿನ ಭಾಷಣಗಳು. ಪ್ರಬುದ್ಧ ಕರ್ನಾಟಕದ ಸಂಚಿಕೆಗಳು. ಕನ್ನಡ ನುಡಿಯ ಸಂಚಿಕೆಗಳು. ಪ್ರಜಾವಾಣಿ, ಕರ್ಮವೀರ ಇತ್ಯಾದಿ.

---

## ಕುವೆಂಪುರವರ ಕೃತಿಗಳು

### ಕವಿತೆ

ಅಮಲನ ಕಥೆ
ಕಥನಕವನಗಳು
ಕೊಳಲು
ಕೋಗಿಲೆ ಮತ್ತು ಸೋವಿಯಟ್ ರಶಿಯ
ಕೃತ್ತಿಕೆ
ನವಿಲು
ಶ್ರೀಸ್ವಾತಂತ್ರ್ಯೋದಯ ಪ್ರಗಾಥಾ
ಬೊಮ್ಮನಹಳ್ಳಿ ಕಿಂದರಿಜೋಗಿ
ನನ್ನ ಮನೆ
ಮೇಘಪುರ
ಶ್ರೀರಾಮಾಯಣ ದರ್ಶನಂ
ಚಿತ್ರಾಂಗದಾ
ಬೆಳ್ಳಿಹಬ್ಬದ ಕಬ್ಬದ ಬಳ್ಳಿ
ಪಾಂಚಜನ್ಯ
ಪ್ರೇಮಕಾಶ್ಮೀರ
ಷೋಡಶಿ
ಪಕ್ಷಿಕಾಶಿ
ಕಲಾಸುಂದರಿ
ಜೇನಾಗುವಾ
ಕಿಂಕಿಣಿ
ಹಾಳೂರು
ಮರಿವಿಜ್ಞಾನಿ
ಚಂದ್ರಮಂಚಕೆ ಬಾ
ಚಕೋರಿ

### ಕಥೆ, ಚಿತ್ರ, ಕಾದಂಬರಿ

ಸನ್ಯಾಸಿ ಮತ್ತು ಇತರ ಕಥೆಗಳು. ಮಲೆನಾಡಿನ ಚಿತ್ರಗಳು. ನನ್ನ ದೇವರು ಮತ್ತು ಇತರ ಕಥೆಗಳು. ಕಾನೂರು ಹೆಗ್ಗಡತಿ.

## ನಾಟಕಗಳು

ಮೋಡಣ್ಣನ ತಮ್ಮ
ಬಿರುಗಾಳಿ
ಮಹಾರಾತ್ರಿ
ಶೂದ್ರ ತಪಸ್ವಿ ಮತ್ತು ಬಲಿದಾನ
ಯಮನ ಸೋಲು
ರಕ್ತಾಕ್ಷಿ
ಮೂರು ನಾಟಕಗಳು
ಬೆರಳ್‌ಗೆ ಕೊರಳ್
ನನ್ನ ಗೋಪಾಲ

## ಭಾಷಣಗಳು

ಸಾಹಿತ್ಯ ಪ್ರಚಾರ
ನಿರಂಕುಶಮತಿಗಳಾಗಿ

## ವಿಮರ್ಶೆ

ಕಾವ್ಯವಿಹಾರ
ತಪೋನಂದನ

## ಜೀವನ ಚರಿತ್ರೆ

ಶ್ರೀರಾಮಕೃಷ್ಣ ಪರಮಹಂಸ
ಸ್ವಾಮಿ ವಿವೇಕಾನಂದ

## ಇತರ

ವಿಭೂತಿ ಪೂಜೆ
ಜನಪ್ರಿಯ ರಾಮಾಯಣ
ಬಾಪೂವಿಗೆ ಬಾಷ್ಪಾಂಜಲಿ
ವೇದಾಂತ
ಗುರುವಿನೊಡನೆ ದೇವರೆಡೆಗೆ

---

**ಮುಂದಿನ ಕಿರಣ**

ಕನ್ನಡದ ಕಣ್ವಮುನಿ

**ಶ್ರೀ. ಬಿ. ಎಂ. ಶ್ರೀ.**

( ಜೀವನ ಹಾಗು ಕೃತಿಗಳ ಪರಿಚಯ )

## ಇದೇ ಲೇಖಕರ ಇತರ ಕೃತಿಗಳು




ತೂರಿ ಬಂದ ತಾರೆ
ಚೈತ್ರಯಾತ್ರೆ
ಕಣ್ಣೀರಿನ ಕಡಲು
ಮಂಗಳ ದೀಪ
ವಿದ್ಯಾಧರೆ
ಮಿಸ್ ಲೀಲಾವತಿ
ಗೃಹಿಣಿ
ಮಮತೆಯ ಸುಳಿ
ಜಗನ್ಮೋಹಿನಿ
ಶಾಂತಿವಾದಿ
ರಾಜದ್ರೋಹಿ
ಅಮಾತ್ಯ ರತ್ನ
ಹುಚ್ಚು ದೊರೆ (ಅಚ್ಚಿನಲ್ಲಿ)
ರಕ್ಕಸ ತಂಗಡಿ ,,
ಶ್ರೀಚಾಲುಕ್ಯ ವಿಕ್ರಮ ,,


